THE

# KATHA PRASANGA

OF

## MAHABHARATA,

## SABHA PARVA.

---

" ಅಮಲೀಮಸಮಚ್ಛಿದ್ರ
ಮಕ್ರಾರ್ಯಮತಿಸುಂದರಮ್ ।
ಅದೇಯಮಪ್ರತಿಗ್ರಾಹ್ಯ
ಮಹೋ ಜ್ಞಾನಂ ಮಹಾಧನಮ್ ! ॥ "

# ಮಹಾಭಾರತ ಕಥಾಪ್ರಸಂಗ

ಸಭಾಪರ್ವ,

*BY*

*M. A. Ramanuja Iyengar & S. G. Narasimhachar.*

Second Edition, 2000 Copies.

MYSORE :
PRINTED AT THE WESLEYAN MISSION PRESS.
1892.

# ವಿಷಯ ವಿವರಣೆ.







# ಶೋಧನಪತ್ರ.

| ಪುಟ. | ಪಙ್ತಿ. | | | |
|---|---|---|---|---|
| ೩. | ೧. | ಹೊರಟ | for | ಹೊರಟು. |
| ೪. | ೧೦. | ಮಂಲಡ | ,, | ಮಂಡಲ. |
| ೭. | ೨೩. | ಕಬೇರ | ,, | ಕುಬೇರ. |
| ೪೧. | ೧೫. | ಶಿತುಪಾಲ | ,, | ಶಿಶುಪಾಲ. |
| ೬೪. | ೨೧. | ಉರಿಳಿಸಿದನು | ,, | ಉರುಳಿಸಿದನು. |
| ೬೭. | ೨೧. | ಪಾಂಡವರಿದ | ,, | ಪಾಂಡವರಿದ್ದ. |
| ೬೮. | ೧೦. | ಇಲ್ಲದಿದ್ದರೇನ | ,, | ಇಲ್ಲದಿದ್ದರೇನು. |
| ೭೦. | ೧೯. | ದುರ್ವಾಕ್ಯಗಳನ್ನಾಡಲಾರಂಭಿಸಿದರು | for | ದುರ್ವಾಕ್ಕುಗಳನ್ನಾಡಲಾರಂಭಿಸಿದನು. |

---

| | | | | |
|---|---|---|---|---|
| ೭೧. | ೮. | ಇಂತೆತನು | for | ಇಂತೆಂದನು. |
| ೮೮. | ೨೪. | ಇದು | ,, | ಇದ್ದು. |

# ಮಹಾಭಾರತ ಕಥಾಪ್ರಸಂಗ

## ಸಭಾ ಪರ್ವ.

ಕಂ || ವಂದಿಸಿ ನಾರಾಯಣನಂ |
ವಂದಿಸಿ ನರವರ್ಯನಪ್ಪ ನರನಂ ಬಳಿಯಂ ||
ವಂದಿಸಿ ವಾಣೀವಧುವಂ |
ವಂದಿಸಿ ಬಿಯಸನುಮನೊಡನೆ ನುಡಿವುದು ಜಯಮಂ ||

### ೧. ಪಾಂಡವರು ಅರಮನೆಯನ್ನು ಕಟ್ಟಿಸಿದ್ದು.

ಅನಂತರದಲ್ಲಿ ಮಯನು ವಾಸುದೇವನ ಇದಿರಿಗೆ ಅರ್ಜುನನನ್ನು ಪೂಜಿಸಿ, ಕೈಗಳನ್ನು ಜೋಡಿಸಿ ನಿಂತುಕೊಂಡು, "ಎಲೈ, ಕುಂತೀಕುಮಾರನೇ, ಕೃಷ್ಣನ ಕೋಪದಿಂದಲೂ, ಬೆಂಕಿಯ ಭೀತಿಯಿಂದಲೂ, ನನ್ನನ್ನು ಸಲಹಿದೆ, ಇದಕ್ಕೆ ನಾನು ಯಾವ ಪ್ರತ್ಯುಪಕಾರವನ್ನು ಮಾಡಲಿ, ಹೇಳು." ಎಂದು ಬೆಸಗೊಂಡನು. ಅರ್ಜುನನು "ಎಲೈ ಅಸುರಶ್ರೇಷ್ಠನೇ, ನಿನ್ನ ವಿನಯವಚನದಿಂದಲೇ ನಾವು ಸತ್ಕೃತರಾದೆವು. ನಿನಗೆ ಶುಭವಾಗಲಿ. ನಿನಗೆ ಇಷ್ಟಬಂದಲ್ಲಿಗೆ ತೆರಳು. ನಾವು ನಿನ್ನ ವಿಷಯದಲ್ಲಿ ಹ್ಯಾಗೋ, ನೀನೂ ನಮ್ಮಲ್ಲಿ ಹಾಗೆಯೇ ದಯೆಯುಳ್ಳವನಾಗಿರು." ಎಂದು ಹೇಳಲು; "ಎಲೈ, ಪಾಂಡವೋತ್ತಮನೇ, ನೀನು ಹೇಳಿದ ಮಾತುಗಳು ನಿನ್ನಂಥಾವನಿಗೆ ತಕ್ಕವುಗಳು. ಏನಾದರೂ ಪ್ರತ್ಯುಪಕಾರವನ್ನು ಮಾಡಬೇಕೆಂದು ನನಗೆ ಬಹಳ ಕುತೂಹಲವಿರುವದು. ನನ್ನ ಪ್ರಾರ್ಥನೆಯನ್ನು ಹ್ಯಾಗಾದರೂ ಕೈಕೊಳ್ಳಬೇಕು. ನಾನು ಶಿಲ್ಪಿಯು; ದಾನವರ ವಿಶ್ವಕರ್ಮನು; ಆದುದುರಿಂದ ನನ್ನ ವಿದ್ಯಾಕೌಶಲ್ಯವನ್ನು ತೋರಿಸುವೆನು. ಸ್ವೀಕರಿಸಬೇಕು." ಎಂದು ಬಹುವಿಧವಾಗಿ ಪ್ರಾರ್ಥಿಸಿಕೊಂಡನು. ಅರ್ಜುನನು ಅವನ ಪ್ರಾರ್ಥನೆಯನ್ನು ನಿರಾಕರಿಸಲಾರದೆ, "ಎಲೈ

ಶಿಲ್ಪಿವರ್ಯನೇ, ನಿನ್ನ ಕುತೂಹಲಕ್ಕೆ ಭಂಗವನ್ನುಂಟುಮಾಡುವದಕ್ಕೆ ನನ್ನಮನಸ್ಸು ಒಡಂಬಡುವದಿಲ್ಲ. ನಮ್ಮ ಕೃಷ್ಣ ಸ್ವಾಮಿಗೆ ಯಾವದನ್ನಾದರೂ ಮಾಡಿಕೊಡು. ಅದೇ ನಾನು ಮಾಡಿದುದಕ್ಕೆ ಸರಿಯಾದ ಪ್ರತ್ಯುಪಕಾರವಾಗಿರುವದು." ಎಂದು ಹೇಳಿದನು.

ಕೂಡಲೇ, ಮಯನು ಕೃಷ್ಣನನ್ನು ಪ್ರಾರ್ಥಿಸಿಕೊಳ್ಳಲು; ಆತನು ಸ್ವಲ್ಪ ಕಾಲದವರೆಗೂ ಯೋಚಿಸಿ ಅವನನ್ನು ನೋಡಿ, "ಎಲೈ, ಶಿಲ್ಪಿಶ್ರೇಷ್ಠನೇ, ಪಾಂಡವರಿಗೆ ಹಿತವನ್ನು ಮಾಡಬೇಕೆಂದು ನಿನಗೆ ಕೋರಿಕೆ ಇದ್ದರೆ ಅವರಿಗೆ ಒಂದು ಅರಮನೆಯನ್ನು ಕಟ್ಟಿಕೊಡು. ಅದು ದೇವದಾನವಶಿಲ್ಪಿಗಳು ಯಾರಿಂದಲೂ ಕಟ್ಟಲಸಾಧ್ಯವಾಗಿರುವಂತೆ ಇರಬೇಕು." ಎಂಬದಾಗಿ ಹೇಳಿದನು. ಮಯನು ಸಂತೋಷದಿಂದ ಉಬ್ಬಿ, ತಾನು ಕೃತಾರ್ಥನೆಂದು ಹಿಗ್ಗಿ, ಇಂದ್ರನ ಅರಮನೆಯನ್ನು ನಗುವಂತೆ ಒಂದು ಅರಮನೆಯನ್ನು ಕಟ್ಟುವೆನೆಂಬದಾಗಿ ಹೇಳಿ, ಬೇಕಾದ ಸರಕುಗಳನ್ನು ಒದಗಿಸಬೇಕೆಂದು ಯೋಚಿಸುತ್ತಿದ್ದನು. ಈ ಸಂಗತಿಯನ್ನು ಧರ್ಮರಾಯನಿಗೆ ತಿಳಿಸಲು ಉಚಿತವೆಂದು ಬಗೆದು ಕೃಷ್ಣಾರ್ಜುನರು ಮಯನನ್ನು ಖಾಂಡವಪ್ರಸ್ಥಕ್ಕೆ ಕರೆದುಕೊಂಡು ಹೋಗಿ, ಒಡ್ಡೋಲಗದಲ್ಲಿ ಕುಳಿತಿದ್ದ ಧರ್ಮರಾಜನನ್ನು ಕಾಣಿಸಿಕೊಂಡರು. ಧರ್ಮರಾಜನು ಇವರನ್ನು ತಕ್ಕ ಮನ್ನಣೆಗಳಿಂದ ಸತ್ಕರಿಸಿ, ತನ್ನ ಅರಮನೆಯಲ್ಲಿ ಕೆಲವು ದಿವಸ ಇರಿಸಿಕೊಂಡಿದ್ದನು.

ಬಳಿಕ ಒಂದು ಶುಭದಿವಸದಲ್ಲಿ ಸಾವಿರಾರು ಬ್ರಾಹ್ಮಣರನ್ನು ದಾನಮಾನಾದಿಗಳಿಂದ ಪೂಜಿಸಿ, ಒಂದು ಉತ್ತಮವಾದ ಪ್ರದೇಶದಲ್ಲಿ ನಾಲ್ಕುಸಾವಿರ ಮೊಳ ಚೌಕವನ್ನು ಅಳತೆಮಾಡಿಸಿ ಗೊತ್ತುಮಾಡಿ, ಧರ್ಮನಂದನನು ಅರಮನೆಯನ್ನು ಕಟ್ಟಿಸುವ ಯೋಚನೆಯಲ್ಲಿದ್ದನು.

ಹೀಗೆ ಇರುವಲ್ಲಿ ಕೃಷ್ಣಸ್ವಾಮಿಯು ತಾನು ಊರನ್ನು ಬಿಟ್ಟು ಬಹಳ ದಿವಸವಾದುದರಿಂದ ಮರಳಿ ಹೋಗಬೇಕೆಂದು ಬಗೆದು, ಒಂದು ಶುಭದಿವಸವನ್ನು ಗೊತ್ತುಮಾಡಿ, ಆ ದಿನ ಪ್ರಾತಃಕಾಲದಲ್ಲಿ ಎದ್ದು, ಮಂಗಳಸ್ನಾನವನ್ನು ನಿರ್ವರ್ತಿಸಿ, ದಿವ್ಯವಸನಾಭರಣಗಳಿಂದಲಂಕೃತನಾಗಿ, ಆರೋಗಣೆಯನ್ನು ಮಾಡಿಕೊಂಡು,

ತಾಂಬೂಲವನ್ನು ಸ್ವೀಕರಿಸಿ, ಪ್ರಯಾಣಾಭಿಮುಖನಾಗಿ ಹೊರಟ, ಕುಂತೀ ದೇವಿಗೆ ಅಭಿವಂದಿಸಿ ಅವಳ ಅನುಮತಿಯನ್ನು ಪಡೆದು, ತನಗೆ ನಮಸ್ಕರಿಸಿದ ತಂಗಿಯಾದ ಸುಭದ್ರೆಯನ್ನು ಆಶೀರ್ವದಿಸಿ, ತತ್ಕಾಲೋಚಿತವಾದ ಹಿತೋಕ್ತಿಗಳನ್ನು ಹೇಳಿ, ನಂಟರಿಷ್ಟರಿಗೆಲ್ಲಾ ಅವಳು ಹೇಳಿದ ಸಮಾಚಾರಗಳನ್ನು ಕೇಳಿಕೊಂಡು, ಹೊರಗೆ ಬಂದು, ಅಲ್ಲಿ ಸಿದ್ಧವಾಗಿದ್ದ ಹೊಂದೇರನ್ನು ಪಾಂಡವರೊಡನೆ ಏರಿದನು. ಪಾಂಡವರು ಭಾವಿವಿಶ್ಲೇಷಭೀತಿಯಿಂದ ಸ್ನೇಹರಸವು ಸೂರು ಪಾಲು ಹೆಚ್ಚಲು, ಆದರದಿಂದ ಸುಖಸಂಕಥಾಲಾಪಗಳನ್ನು ಮಾಡುತ್ತಾ ಅರ್ಧ ಯೋಜನದವರೆಗೂ ಜೊತೆಯಲ್ಲಿಯೇ ಹೋಗಿ, ಅಲ್ಲಿ ಕೃಷ್ಣಸ್ವಾಮಿಯನ್ನು ಬಿಟ್ಟು ಬರಲಾರದೆ, ಮರಳಿಮರಳಿ ಮಾತಾಡಿಸುತ್ತಾ, ಆಲಿಂಗಿಸುತ್ತಾ, ಬಹಳ ಕಾಲವನ್ನು ಕಳೆದು, ಕಡೆಗೆ ಅವನ ಅಪ್ಪಣೆಯನ್ನು ಪಡೆದು, ತಮ್ಮ ಪುರಕ್ಕೆ ಹೊರಟುಬಂದರು. ಅತ್ತ ಕೃಷ್ಣಸ್ವಾಮಿಯು ಜಾಗ್ರತೆಯಾಗಿ ಪ್ರಯಾಣಮಾಡುತ್ತಾ ದ್ವಾರಕಾಪುರವನ್ನು ಪ್ರವೇಶಿಸಿದನು.

ಕೃಷ್ಣಸ್ವಾಮಿಯನ್ನು ಸಾಗಕಳುಹಿಸಿ ಪಾಂಡವರು ಮರಳಿ ಬಂದಮೇಲೆ ಮಯನು ಅರ್ಜುನನನ್ನು ಕುರಿತು ಇಂತೆಂದನು:— "ಕೈಲಾಸಕ್ಕೆ ಬಡಗಣ ದೆಸೆಯಲ್ಲಿ ಮೈನಾಕಪರ್ವತದ ಬಳಿಯಲ್ಲಿ ಬಿಂದುಸರಸ್ಸೆಂಬ ಒಂದು ಸರೋವರವುಂಟು. ಒಂದು ಕಾಲದಲ್ಲಿ ದಾನವರು ಅಲ್ಲಿ ಒಂದು ಯಾಗವನ್ನು ಮಾಡಿದರು. ಆವಾಗ ಅಲ್ಲಿ ರತ್ನಗಳಿಂದ ಪೂರಿತವಾದ ಒಂದು ಭಾಂಡವು ನನಗೆ ಸಿಕ್ಕಿತು. ಅದನ್ನು ವೃಷಪರ್ವರಾಯನ ಮನೆಯಲ್ಲಿಟ್ಟಿರುವೆನು. ಅದು ಇನ್ನೂ ಅಲ್ಲಿ ಇದ್ದರೆ ಅದನ್ನು ತರುವೆನು. ಕೂಡಲೇ ನಿಮ್ಮ ಅರಮನೆಯನ್ನು ಕಟ್ಟತೊಡಗಿ, ಆ ಅನರ್ಘವಾದ ರತ್ನಗಳಿಂದ ಅದನ್ನು ಅಲಂಕರಿಸುವೆನು. ಇದೂ ಅಲ್ಲದೆ ಅಲ್ಲಿ ದಾನವಚಕ್ರವರ್ತಿಯ ಗದೆಯೊಂದಿರುವದು. ಶತ್ರುಗಳನ್ನೆಲ್ಲಾ ಆದರಿಂದಲೇ ಕೊಂದು ಅದನ್ನು ದಾನವಚಕ್ರವರ್ತಿಯು ಅಲ್ಲಿಟ್ಟನು. ಅದು ನಿಮ್ಮ ಭೀಮನಿಗೆ ಸರಿಯಾದ ಆಯುಧವು. ಮತ್ತು ಅಲ್ಲಿ ದೇವದತ್ತವೆಂಬ ವರುಣನ ಶಂಖವೊಂದಿರುವದು. ಇವುಗಳೆಲ್ಲವನ್ನೂ ನಿಮಗೆ ತಂದುಕೊಡುವೆನು." ಎಂದು ಹೇಳಿ, ಈಶಾನ್ಯಾಭಿಮುಖವಾಗಿ ಹೊರಟು, ಕೈಲಾಸಪರ್ವ

ತವನ್ನು ದಾಟಿ, ಅದಕ್ಕೆ ಉತ್ತರದಲ್ಲಿರುವ ಮೈನಾಕಪರ್ವತದ ಹಿರಣ್ಯಶೃಂಗದಲ್ಲಿ ನರನಾರಾಯಣರೂ, ದೇವೇಂದ್ರನೂ, ಇತರರೂ ಮಾಡಿದ ಯಜ್ಞಗಳ ಸಂಖ್ಯೆಗಳನ್ನು ಸೂಚಿಸಲೋ ಎಂಬಂತೆ ನಿಂತಿದ್ದ ರತ್ನಮಯವಾದ ಯೂಪಸ್ತಂಭಸಹಸ್ರಗಳಿಂದಲಂಕೃತವಾದ ಬಿಂದುಸರಸ್ಸನ್ನು ಸೇರಿ, ಅಲ್ಲಿದ್ದ ಶಂಖವನ್ನೂ ಗದೆಯನ್ನೂ ಯಕ್ಷರಾಕ್ಷಸರ ಕಾಹಿನಲ್ಲಿದ್ದ ಅಮೌಲ್ಯವಾದ ರತ್ನಗಳನ್ನೂ ತೆಗೆದುಕೊಂಡು ಹಿಂದಿರುಗಿ ಬಂದು, ಪಾಂಡವರಿಗೆ ಅರಮನೆಯನ್ನು ಕಟ್ಟಿದನು.

ಸ್ವರ್ಣಸ್ತಂಭಗಳಿಂದ ರಂಜಿಸುತ್ತಿದ್ದ ಆ ರಾಜಗೃಹವು ನಾಲ್ಕು ಸಾಸಿರ ಮೊಳ ಚದುರಳತೆಯುಳ್ಳದ್ದಾಗಿತ್ತು. ಅದು ಸೋಮಸೂರ್ಯಾಗ್ನಿಗಳ ಅರಮನೆಯನ್ನು ಏಡಿಸುತ್ತಾ, ಸೂರ್ಯಕಿರಣಗಳನ್ನು ನೋಡಿ ನಗುವಂತೆ ಹೊಂಬಣ್ಣದಿಂದ ವಿರಾಜಿಸುತ್ತಾ, ಮೇಘಮಂಡಲದಂತೆ ಅಂತರಿಕ್ಷಭಾಗದಲ್ಲಿ ಕಣ್ಣಿಗೆ ಗೋಚರಿಸುತ್ತಿತ್ತು. ಮತ್ತು ಉಪಭೋಗಾರ್ಹವಾದ ಪದಾರ್ಥಸಮೃದ್ಧಿಯಿಂದಲೂ ಉತ್ತಮತರವಾದ ಚಿತ್ರಪಟಗಳಿಂದಲೂ ನೋಡಿದವರ ಕಣ್ಣನ್ನೂ ಮನಸ್ಸನ್ನೂ ಸೆರೆಹಿಡಿಯುತ್ತಿತ್ತು. ಹೀಗೆ ಇದ್ದ ಅರಮನೆಯ ಒಳವಳಯದಲ್ಲಿ ಕುಮುದಕಲ್ಹಾರಾದ್ಯನೇಕಜಲಪುಷ್ಪಸಂಕುಲದಿಂದಲೂ, ಹಂಸಕಾರಂಡವಪ್ರಮುಖ ಜಲಪಕ್ಷಿಗಳ ಕಲಕಲಧ್ವನಿಯಿಂದಲೂ, ಮತ್ಸ್ಯಕೂರ್ಮಾದ್ಯನೇಕಜಲಚರನಿಕರದಿಂದಲೂ, ಪರಿಶೋಭಿತವಾದ ಒಂದು ಶೃಂಗಾರಸರೋವರವಿತ್ತು. ಅದಕ್ಕೆ ಸ್ಫಟಿಕದ ಪಾವಟಿಗೆಗಳು ಕಟ್ಟಿದ್ದವು. ಅದರ ಸುತ್ತಲೂ ಛಾಯಾವೃಕ್ಷಗಳೂ, ಪರಿಮಳಭರದಿಂದ ತುಂಬಿಗಳನ್ನು ಬಂದಿಹಿಡಿಯುವ ಪುಷ್ಪಿತಲತಾವಳಿಗಳೂ ತೀವಿದ ಒಂದು ನಂದನವನವಿತ್ತು.

ಇಷ್ಟು ಅಣಿಯಾದ ಅರಮನೆಯನ್ನು ಮಯನು ಹದಿನಾಲ್ಕು ತಿಂಗಳುಗಳಲ್ಲಿ ಕಟ್ಟಿ, ಧರ್ಮರಾಜನಿಗೆ ಒಪ್ಪಿಸಿದನು. ಆ ಅರಮನೆಯನ್ನು ಪ್ರವೇಶಿಸುವದಕ್ಕೆ ಒಂದು ಶುಭದಿವಸವನ್ನು ಮೌಹೂರ್ತಿಕರಿಂದ ಗೊತ್ತುಮಾಡಿಸಿ, ಸಾಸಿರಾರು ಬ್ರಾಹ್ಮಣರನ್ನು ಮೃಷ್ಟಾನ್ನಭೋಜನದಿಂದಲೂ, ವಸ್ತ್ರಾಭರಣಗಳಿಂದಲೂ ತೃಪ್ತಿಪಡಿಸಿ, ಅವರಿಗೆ ಬೇಕಾದಷ್ಟು ಪಶ್ವಾದಿಗಳನ್ನು ಕೊಟ್ಟು, ಅಸಿತ, ದೇವಲ, ಸತ್ಯ, ಸರ್ಪಮಾಲಿ ಮೊದಲಾದ ಮುನಿಶ್ರೇಷ್ಠರಿಂದಲೂ ಮುಂಜಕೇತು,

ವಿವರ್ಧನ, ಸಂಗ್ರಾಮಜಿತ್ತು ಮೊದಲಾದ ನೃಪತಿಶ್ರೇಷ್ಠರಿಂದಲೂ ಪರಿವೇಷ್ಟಿತ ನಾಗಿ, ಅಪ್ಸರೋಂಗನಾನಿವಹವು ಅಂತರಿಕ್ಷದಲ್ಲಿ ಗಾನಮಾಡುತ್ತಿರಲು, ವಿಪ್ರರ ಜಯಜಯನಿನಾದವೂ, ಗಂಧರ್ವರ ಗೀತಧ್ವನಿಯೂ ಘೋರ್ಗರೆಯುತ್ತಿರುವ ಭೇರಿಮೃದಂಗಢಕ್ಕಾಕಾಹಳಾದಿನಾನಾನಕ ರಾವವೂ ದಿಙ್ಮಂಡಲವನ್ನು ಅಂಡಲೆ ಯುತ್ತಿರಲು, ಧರ್ಮರಾಜನು ಅರಮನೆಯನ್ನು ಪ್ರವೇಶಿಸಿದನು.

## ೨. ಲೋಕಪಾಲಕ ಸಭಾವರ್ಣನೆ.

ಇಷ್ಟು ವಿಭವದೊಡನೆ ಅರಮನೆಯನ್ನು ಪ್ರವೇಶಿಸಿ, ಧರ್ಮರಾಜನು ಒಡ್ಡೋ ಲಗವನ್ನು ಕೊಡುತ್ತಿರುವಲ್ಲಿ; ವೇದವೇದಾಂಗತರ್ಕವ್ಯಾಕರಣಾದ್ಯನೇಕಶಾ ಸ್ತ್ರವಿಶಾರದನಾಗಿಯೂ, ಧರ್ಮಜ್ಞನಾಗಿಯೂ, ಮೇಧಾವಿಯಾಗಿಯೂ, ವಾಗ್ಮಿ ವರ್ಯನಾಗಿಯೂ, ಇರುವ ನಾರದಮಹರ್ಷಿಯು ಗಗನದಿಂದ ಸಭೆಗವತರಿಸಿ ದನು. ನೀತಿಜ್ಞನಾದ ಧರ್ಮರಾಜನು ಸಹೋದರರೊಡನೆ ಝುಗ್ಗನೆ ಇದಿರೆದ್ದು ಬಂದು, ಪಾದಪ್ರಣಾಮಗೈದು, ಅರ್ಘ್ಯಪಾದ್ಯಾದ್ಯುಪಚಾರವನ್ನು ಸಮರ್ಪಿಸಿ, ರತ್ನಖಚಿತವಾದ ಆಸನದಲ್ಲಿ ಕುಳ್ಳಿರಿಸಿ, ಸತ್ಕರಿಸಿದನು. ಬಳಿಕ ನಾರದಋಷಿಯು ಧರ್ಮರಾಜನನ್ನು ಕುರಿತು ಇಂತೆಂದನು :—

“ ಎಲೈ ಧರ್ಮತನಯನೆ, ನೀನು ಉಪಾರ್ಜಿಸುವ ಧನಕ್ಕೆ ಸದ್ವಿನಿಯೋಗವಾ ಗುವದೆ? ನಿನಗೆ ಧರ್ಮದಲ್ಲಿ ಅಭಿರುಚಿಯುಂಟೆ? ನೀನು ಸುಖಿಯಾಗಿರುವೆಯಾ? ನಿನಗೆ ಯಾವ ಮನೋವ್ಯಾಕುಲವೂ ಇಲ್ಲದೆ ಇರುವದೆ? ನಿಮ್ಮ ಹಿರಿಯರಂತೆ ಸನ್ಮಾರ್ಗದಲ್ಲಿಯೇ ನಡೆಯುತ್ತಿರುವೆಯಾ? ಧರ್ಮಕ್ಕಾಗಿ ಅರ್ಥವನ್ನೋ, ಅರ್ಥಕ್ಕಾಗಿ ಧರ್ಮವನ್ನೋ, ಇಲ್ಲವೇ ಕಾಮಾರ್ಥವಾಗಿ ಧರ್ಮಾರ್ಥಗಳನ್ನೋ ಯಾವದನ್ನು ಯಾವದಕ್ಕೋಸ್ಕರ ಸಂಪಾದಿಸುತ್ತೀಯೆ? ಪೂರ್ವಪುರುಷರು ಆಚರಿಸಿದ ಧರ್ಮ ಮಾರ್ಗಕ್ಕೆ ಲೋಪವಿಲ್ಲದೆ ನಡಿಸುತ್ತಿರುವೆಯಾ? ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳನ್ನು ಕಾಲವರಿತು ನೆರವೇರಿಸುತ್ತಿರುವೆಯಾ? ಚೆನ್ನಾಗಿ ಪರೀ ಕ್ಷಿಸಿ ಶೀಲಸ್ವಭಾವಗಳನ್ನರಿತು ಸ್ವಾಮಿಭಕ್ತರಾದವರನ್ನೇ ಸೇನೆಯಲ್ಲಿ ಸೇರಿಸಿ ಅವರುಗಳಿಗೆ ಕ್ಲೃಪ್ತವಾದ ಕಾಲದಲ್ಲಿ ಸಂಬಳವನ್ನು ನಿಲ್ಲಿಸದೆ ಕೊಡುತ್ತಿರುವೆ

ಯಾ? ಶತ್ರುಗಳಿಗೆ ಅವಕಾಶವಿಲ್ಲದಂತೆ ರಾಜ್ಯಕ್ಕೆ ಮುಖ್ಯವಾಗಿರುವ ಏಳು ಅಂಗಗಳನ್ನರಿತು ತಪ್ಪಿಲ್ಲದೆ ನಡೆಯುತ್ತಿರುವೆಯಾ? ತಪ್ಪಿಗೆ ತಕ್ಕಂತೆ ಶಿಕ್ಷೆಯನ್ನು ಮಾಡಿ ಪ್ರಜಾನುರಾಗವನ್ನು ಸಂಪಾದಿಸುತ್ತಿರುವೆಯಾ? ನಿನ್ನಿಂದ ಪ್ರಯೋಜನ ವನ್ನು ಪಡೆದು ನಿನ್ನಲ್ಲಿ ಭಕ್ತಿಯನ್ನಿಟ್ಟಿರುವವರನ್ನು ತಿಳಿದು, ಅವರವರುಗಳ ಯೋಗ್ಯತಾನುಗುಣವಾಗಿ ಮನ್ನಿಸಿರುವೆಯಾ? ಪ್ರಜೆಗಳ ಸಂರಕ್ಷಣೆಗೋಸ್ಕರ ಸರಿಯಾದ ಏರ್ಪಾಡನ್ನು ಮಾಡಿ ಅನುರಾಗಪರರಾಗಿರುವ ಜನಗಳಿಗೆ ಆ ಪ್ರ ಜಾಧಿಕಾರವನ್ನು ಕೊಟ್ಟಿರುವೆಯಾ? ಸಂಪಾದಿಸಿದ ಅರ್ಥದಲ್ಲಿ ಅರ್ಧಾಂಶವ ನ್ನಾದರೂ, ಅಥವಾ ಕಾಲುಭಾಗವನ್ನಾದರೂ, ಅಥವಾ ಮೂರರಲ್ಲಿ ಒಂದು ಪಾಲನ್ನಾದರೂ ಉಳಿಸಿ ವ್ಯಯಸಂಶೋಧನವನ್ನು ಮಾಡುತ್ತಿರುವೆಯಾ? ನಿದ್ರೆ, ಆಲಸ್ಯ, ಭಯ, ಕ್ರೋಧ, ಮಾರ್ದವ, ಜಡತೆಗಳೆಂಬ ಆರು ಅನರ್ಥಗಳನ್ನು ಜಯಿಸಿರುವೆಯಾ?" ಎಂದು ಇವೇ ಮೊದಲಾದ ಪ್ರಶ್ನೆಗಳನ್ನು ಮಾಡಿದನು.

ಕುರುಶ್ರೇಷ್ಠನಾದ ಧರ್ಮರಾಜನು ನಾರದನ ಅಡಿಗೆರಗಿ "ಸ್ವಾಮಿ ದೇವ ರ್ಷಿಯಾದ ನಾರದರೇ, ತಾವು ಅಪ್ಪಣೆಕೊಡಿಸಿದವುಗಳೆಲ್ಲವನ್ನು ತಿಳಿದೆನು. ಅದರಂತೆಯೇ ನಡೆಯುವೆನು. ತಮ್ಮ ಉಪದೇಶದಿಂದ ನನ್ನ ಜ್ಞಾನವು ನಿರ್ಮ ಲವಾಯಿತು." ಎಂದು ಹೇಳಿ, ಮರಳಿ ಅರ್ಘ್ಯಪಾದ್ಯಾದ್ಯುಪಚಾರಗಳನ್ನು ಮಾಡಿದನು.

ನಾರದಮುನಿಯು ಪೂಜೆಯನ್ನು ಕೈಕೊಂಡು ವಿಶ್ರಾಂತಿಯನ್ನು ಹೊಂ ದಿದ ತರುವಾಯ ಹಾಗೆಯೇ ಸಭೆಯ ಐಶ್ವರ್ಯವನ್ನು ನೋಡಿ ಧರ್ಮರಾಜನನ್ನು ಕು ರಿತು ಹೇಳಿದನು. "ಎಲೈ ರಾಜನೆ, ನಾನು ಇದುವರೆಗೂ ನೋಡಿದ ಸಭೆಗಳಲ್ಲಿ ನಿನ್ನ ಸಭೆಗೆ ಸಮನಾದದ್ದನ್ನು ನೋಡಿಯೂ ಇಲ್ಲ, ಕೇಳಿಯೂ ಇಲ್ಲ. ಆದರೆ ಇಂದ್ರಯಮ ವರುಣ ಕುಬೇರಮುಂತಾದ ದಿಕ್ಪಾಲಕರ ಸಭೆಯನ್ನೂ ಬ್ರಹ್ಮಸಭೆ ಯನ್ನೂ ವರ್ಣಿಸುವೆನು, ಕೇಳು. 'ಸುಧರ್ಮೆ' ಎಂಬ ಇಂದ್ರನ ಸಭೆಯು ನೂರು ಯೋಜನ ಉದ್ದವುಳ್ಳದ್ದಾಗಿ ಐವತ್ತು ಯೋಜನ ಅಗಲವುಳ್ಳದ್ದಾಗಿ ರತ್ನಗಳ ಕಾಂ ತಿಯಿಂದ ಸೂರ್ಯನಂತೆ ಜ್ವಲಿಸುತ್ತಲಿರುವದು. ಈ ಭೂಲೋಕದಲ್ಲಿ ಧರ್ಮಾ ನುಷ್ಠಾನವನ್ನು ಮಾಡಿದವರೂ ಇದನ್ನು ಹೊಂದುವದಕ್ಕೆ ಅರ್ಹರಲ್ಲ. ಇತರ

ರಿಂದ ನೋಡಲೂ ಕೂಡ ಅಸಾಧ್ಯವಾಗಿರುವದು. ಇಂಥಾ ಈ ಸಭೆಯಲ್ಲಿ ದೇವರಾಜನಾದ ಇಂದ್ರನು ಶಚೀದೇವಿಯೊಡಗೂಡಿ, ಅಪ್ಸರಸ್ತ್ರೀಯರ ನಾಟ್ಯಾತಿಶಯಗಳನ್ನು ವಿಲೋಕಿಸುತ್ತಾ, ಋಷಿಗಳಿಂದಲೂ ಸಿದ್ಧರುಗಳಿಂದಲೂ ಚಾರಣಾದಿಗಳಿಂದಲೂ ಹೊಗಳಿಸಿಕೊಳ್ಳುತ್ತಾ, ದೇವರಾಜ್ಯವನ್ನು ಮಾಡುತ್ತಿರುವನು. * ಮುಂದೆ ಯಮನಸಭೆಯನ್ನು ನಿರೂಪಿಸುವೆನು, ಕೇಳು. ವಿಶ್ವಕರ್ಮನು ತನ್ನ ಶಿಲ್ಪಾತಿಶಯವನ್ನು ತೋರಿಸಿ ಯಮನಿಗೆ ಒಂದು ದಿವ್ಯಸಭೆಯನ್ನು ಮಾಡಿಕೊಟ್ಟಿರುವನು. ಈ ಸಭೆಯಲ್ಲಿರುವವರಿಗೆ ಹಸಿವುಬಾಯಾರಿಕೆಗಳ ಗೋಜುಗಳೊಂದೂ ಇಲ್ಲದೆ, ಯಾವ ಕಾಲದಲ್ಲಿಯೂ ರುಚಿಮತ್ತಾಗಿಯೂ ಅತ್ಯುತ್ತಮವಾಗಿಯೂ ಇರುವ ಭಕ್ಷ್ಯಭೋಜ್ಯಾದಿಗಳು ಸುಲಭವಾಗಿ ಲಭಿಸುತ್ತಾ, ಆನಂದವೇ ತಲೆಯನ್ನೆತ್ತಿರುವದು. ಅಲ್ಲಿ ಯಯಾತಿನಹುಷದಿಲೀಪಾದಿರಾಜರ್ಷಿಗಳು ದಿವ್ಯಾಲಂಕಾರಭೂಷಿತರಾಗಿ ದಿವ್ಯಭೋಗವನ್ನು ಕೈಕೊಳ್ಳುತ್ತಾ, ಸರ್ವದಾ ಸೂರ್ಯಚಂದ್ರರುಗಳಂತೆ ಜ್ವಲಿಸುತ್ತಿರುವರು. *ಪಶ್ಚಿಮದಿಕ್ಪತಿಯಾದ ವರುಣನ ಸಭೆಯು ಅತಿವಿಚಿತ್ರವಾಗಿ ಅಗಲದಲ್ಲಿಯೂ ಉದ್ದದಲ್ಲಿಯೂ ಇತರಸಭೆಗಳಿಗಿಂತಲೂ ಪ್ರಶಸ್ತಿಯನ್ನು ತಾಳಿರುವದು. ಇಲ್ಲಿ ಅನೇಕಸರಸ್ಸುಗಳು ದಿವ್ಯಧ್ವನಿಗಳುಳ್ಳ ಪಕ್ಷಿಗಳಿಂದ ಕೂಡಿದವುಗಳಾಗಿ ವರುಣನಿಗೆ ಆನಂದವನ್ನುಂಟುಮಾಡುತ್ತಿರುವವು. ಇಲ್ಲಿ ದ್ವಾದಶಾದಿತ್ಯರುಗಳೂ ಮಣಿಮಂತನೇ ಮೊದಲಾದ ನಾಗಗಳೂ ಸಿದ್ಧಾದಿಗಳೂ ದಿವ್ಯಾಲಂಕಾರಗಂಧಮಾಲ್ಯಾದಿಗಳನ್ನು ಧರಿಸಿ ವಿಹರಿಸುತ್ತಿರುವರು. * ಉತ್ತರದಿಕ್ಪತಿಯಾದ ಕುಬೇರನ ಸಭೆಯು ನೂರುಯೋಜನ ಉದ್ದವುಳ್ಳದ್ದಾಗಿಯೂ ಎಪ್ಪತ್ತು ಯೋಜನ ಅಗಲ ಉಳ್ಳದ್ದಾಗಿಯೂ ಇರುವದು. ಇದಕ್ಕೆ ಚಿನ್ನದಿಂದಲೇ ಮಾಡಿದ ಕೋಟೆ ಇರುವದು. ಇದರಲ್ಲಿ ಕುಬೇರನು ಯಕ್ಷರನ್ನಾಳುತ್ತಾ, ಸುಖವಾಗಿರುತ್ತಿರುವನು. ಮಿಶ್ರಕೇಶೀರಂಭಾಮುಂತಾದ ಅಪ್ಸರಸ್ತ್ರೀಯರ ನರ್ತನದಿಂದಲೂ ಚಿತ್ರಸೇನನೇ ಮುಂತಾದ ಗಂಧರ್ವರ ಗಾನದಿಂದಲೂ ಕಬೇರನ ಮನಸ್ಸು ಆಹ್ಲಾದಪಡುತ್ತಿರುವದು. ಹಿಮವಾನ್, ಪಾರಿಯಾತ್ರ, ಗಂಧಮಾದನ, ಮಲಯ, ದರ್ದುರ ಇವೇ ಮುಂತಾದ ಮೇರುವಿನಪ್ರಾಂತದಕುಲಾಚಲಗಳು ಅವನಿಗೆ ಭೋಗಸ್ಥಾನಗಳಾ

ಗಿರುವವು. ಶಂಖ, ಪದ್ಮ ಇವೇ ಮೊದಲಾದ ನವನಿಧಿಗಳು ಅವನಿಗೆ ವಶವಾಗಿರುವವು. * ಎಲೈ ಧರ್ಮರಾಜನೆ, ಲೋಕಪಾಲಕರ ಸಭೆಗಳ ಮಾತಂತಿರಲಿ. ಬ್ರಹ್ಮದೇವನ ಸಭೆಯ ವೈಭವವನ್ನು ಹೇಳುವೆನು, ಕೇಳು. ಬ್ರಹ್ಮನ ಸಭೆಯ ವೈಭವವನ್ನು ಮನಸ್ಸಿನಿಂದಲೂ ಸಿರ್ಧರಿಸುವದಕ್ಕೆ ಆಗುವದಿಲ್ಲ. ಪೂರ್ವದಲ್ಲಿ ದೇವಯುಗಾರಂಭದಲ್ಲಿ ಸೂರ್ಯನು ಬ್ರಹ್ಮಸಭೆಯನ್ನು ನೋಡಿದ ಮೇಲೆ ಮನುಷ್ಯಲೋಕದಲ್ಲಿ ವಿಹರಿಸಬೇಕೆಂಬ ಇಚ್ಛೆಯಿಂದ ಮನುಷ್ಯರೂಪವನ್ನು ತಾಳಿ, ಭೂಮಿಯಲ್ಲಿ ಸಂಚರಿಸುತ್ತಾ, ನನ್ನೊಡನೆ ಬ್ರಹ್ಮಸಭೆಯ ನಿಜಾಂಶವನ್ನು ವಿಸ್ತರಿಸಿ ಹೇಳಿದನು. ಅದರ ಸೌಭಾಗ್ಯವನ್ನು ಕೇಳಿ, ವಿಸ್ಮಿತನಾಗಿ 'ಎಲೈ ಸೂರ್ಯನೇ, ಆ ಬ್ರಹ್ಮಸಭೆಯನ್ನು ನೋಡಬೇಕೆಂದು ನನಗೆ ಕುತೂಹಲವುಂಟಾಗಿದೆ. ಅದನ್ನು ಪ್ರತ್ಯಕ್ಷವಾಗಿ ನೋಡಬೇಕಾದರೆ ಯಾವ ತಪಸ್ಸನ್ನು ಮಾಡಬೇಕು. ಯಾವ ಕರ್ಮವನ್ನು ಮಾಡಬೇಕು. ಅಥವಾ ಯಾವ ಸಿದ್ಧೌಷಧಿಗಳನ್ನೂ ಮಂತ್ರಗಳನ್ನೂ ಸಂಪಾದಿಸಬೇಕು. ಅದನ್ನು ನನಗೆ ಹೇಳು.' ಎಂದು ಕೇಳಿದೆನು. 'ಬ್ರಹ್ಮವ್ರತವನ್ನು ಮಾಡು.' ಎಂದು ಸೂರ್ಯನು ಹೇಳಿದನು. ಅದರಂತೆ ಹಿಮವತ್ಪರ್ವತದಲ್ಲಿ ಬ್ರಹ್ಮವ್ರತವನ್ನು ಮಾಡಿದೆನು. ಅನಂತರ ಸೂರ್ಯನನ್ನು ಕರೆದುಕೊಂಡು ಆತನೊಡನೆ ಬ್ರಹ್ಮಲೋಕಕ್ಕೆ ಹೋಗಿ, ಸಭೆಯನ್ನು ನೋಡಿದೆನು. ಅದರ ರೂಪವನ್ನಾಗಲಿ ಐಶ್ವರ್ಯವನ್ನಾಗಲಿ ಯಾರಿಂದಲೂ ಹೇಳಲು ಸಾಧ್ಯವಲ್ಲ. ಅದರ ಸೊಬಗು ಮನಸ್ಸಿಗೂ ಗೋಚರವಾಗಲಾರದು. ಕೋಟಿಸೂರ್ಯಚಂದ್ರಾಗ್ನಿಗಳ ತೇಜಸ್ಸೂ ಕೂಡ ಅದಕ್ಕೆ ಸಮವಾಗಲಾರದು. ಇಂಥಾ ಸಭೆಯಲ್ಲಿ ಬ್ರಹ್ಮ ದಕ್ಷ ಮರೀಚಿಗಳೇ ಮುಂತಾದ ನವಪ್ರಜೇಶ್ವರರುಗಳಿಂದಲೂ ಬ್ರಹ್ಮರ್ಷಿ ದೇವರ್ಷಿಗಳೇ ಮುಂತಾದವರಿಂದಲೂ, ಧರ್ಮಾರ್ಥ ಹರ್ಷವೇಮುಂತಾದವುಗಳ ಅಭಿಮಾನಿದೇವತೆಗಳಿಂದಲೂ, ಸಾಂಗಗಳಾದ ಋಗ್ಯಜುಸ್ಸಾಮಾಥರ್ವಣ ವೇದಗಳಿಂದಲೂ, ಕಲಾಕಾಷ್ಠಾದಿ ಕಾಲಾಭಿಮಾನಿ ದೇವತೆಗಳಿಂದಲೂ, ಪಿತೃದೇವತೆಗಳಿಂದಲೂ, ಪರಿವೃತನಾಗಿ ಸಿದ್ಧ ಗಂಧರ್ವಾದಿಗಳಿಂದ ಸ್ತುತಿಸಲ್ಪಡುತ್ತಾ, ಭಗವಂತನ ಆಜ್ಞೆಯಂತೆ ಲೋಕವ್ಯಾಪಾರವನ್ನು ನಡಿಸುತ್ತಿರುವನು. ಮುಖ್ಯವಾಗಿ ಸಪ್ತಲೋಕಗಳಲ್ಲಿರುವ ಉತ್ತಮವಸ್ತುಗಳೆಲ್ಲಾ ಆ ಸಭೆಯಲ್ಲಿ

ಇರುವವು. ದೇವಸಭೆಗಳಲ್ಲಿ ಬ್ರಹ್ಮಸಭೆಯೊಂದು, ಮನುಷ್ಯಲೋಕದಲ್ಲಿ ನಿನ್ನ ಸಭೆಯೊಂದು, ಇವೆರಡೇ ನಾನು ನೋಡಿದ ಅನೇಕಸಭೆಗಳಲ್ಲಿ ರಮಣೀಯವಾದವುಗಳು." ಎಂದನು.

"ಎಲೈ ನಾರದಮುನಿಯೇ, ಕ್ರಮಕ್ರಮವಾಗಿ ಲೋಕಪಾಲಕರ ಸಭೆಗಳ ಸೌಭಾಗ್ಯಗಳನ್ನೆಲ್ಲಾ ನೀವು ಅಪ್ಪಣೆ ಕೊಡಿಸಿದಿರಿ. ಇಂದ್ರಸಭೆಯಲ್ಲಿ ಹರಿಶ್ಚಂದ್ರನೊಬ್ಬನೇ ಇಂದ್ರನ ಅರ್ಧಾಸನವನ್ನು ಆಕ್ರಮಿಸಿರುವನೆಂದು ಹೇಳಿದಿರಿ. ನಮ್ಮ ತಂದೆ ಪಾಂಡುರಾಜನು ಯಮನ ಸಭೆಯಲ್ಲಿ ಯಯಾತಿಯೇ ಮುಂತಾದ ರಾಜರ್ಷಿಗಳೊಡನೆ ಇದಾನೆಂದೂ ಹೇಳಿದಿರಿ. ಆ ಹರಿಶ್ಚಂದ್ರನು ಇವರು ಮಾಡದ ಯಾವಯಾವ ಪುಣ್ಯಕರ್ಮಗಳನ್ನು ಮಾಡಿದನು? ಮಹಾತ್ಮನಾದ ನಮ್ಮ ತಂದೆಯನ್ನು ಕಂಡಿದ್ದಿರಲ್ಲಾ ; ಆತನು ಹ್ಯಾಗಿರುವನು? ಏನೇನು ಹೇಳಿದನು? ಹೇಳಿ." ಎಂದು ಕೇಳಲಾಗಿ ; "ಪೂರ್ವದಲ್ಲಿ ಹರಿಶ್ಚಂದ್ರಮಹಾರಾಜನು ಮಹಾಬಲಶಾಲಿಯಾಗಿ, ಸಕಲರಾಜ್ಯವನ್ನೂ ಜಯಿಸಿ, ಏಕಚ್ಛತ್ರಾಧಿಪತ್ಯವನ್ನು ವಹಿಸಿ, ಧರ್ಮದಿಂದ ರಾಜ್ಯವನ್ನಾಳುತ್ತಾ, ಅನೇಕಯಜ್ಞಗಳನ್ನು ನಡಿಸಿ, ಅತ್ಯಧಿಕವಾಗಿ ದೇವಬ್ರಾಹ್ಮಣಸಂತರ್ಪಣೆಯನ್ನು ಮಾಡಿ, ಸತ್ಯಸಂಧನಾಗಿ ತನ್ನ ಸತ್ಯವನ್ನು ಕಾಪಾಡುವದಕ್ಕಾಗಿ ವಿಶ್ವಾಮಿತ್ರನಿಂದ ಬಂದ ಕಷ್ಟಗಳನ್ನೆಲ್ಲಾ ಅನುಭವಿಸಿ, ಕೀರ್ತಿಯನ್ನು ಸಂಪಾದಿಸಿದ್ದರಿಂದ, ಇಂದ್ರಲೋಕದಲ್ಲಿ ಅತ್ಯುತ್ತಮವಾದ ಸ್ಥಾನವು ಆತನ ಕೈಸೇರಿತು. ನಿಮ್ಮ ತಂದೆಯಾದ ಪಾಂಡುರಾಯನು ನನ್ನನ್ನು ಕಂಡಾಗ 'ತಮ್ಮಂದಿರೊಡನೆ ಸೇರಿ ರಾಜಸೂಯಾದಿಮಹಾಯಾಗಗಳನ್ನು ಹರಿಶ್ಚಂದ್ರನಂತೆ ನನ್ನ ಮಗನೂ ಮಾಡಿದರೆ ನಾನು ಬಹಳ ಸಂತೋಷದೊಡನೆ ಸ್ಥಿರವಾಗಿರುವೆನು.' ಎಂದು ಹೇಳಿದನು. ಆದ್ದರಿಂದ ಆತನ ಅಭಿಪ್ರಾಯದಂತೆ ನೀನು ರಾಜಸೂಯಯಾಗವನ್ನು ಮಾಡು. ಅದನ್ನು ಮಾಡಿದರೆ ನಿಮ್ಮ ತಂದೆಗೆ ಇಂದ್ರಲೋಕಪ್ರಾಪ್ತಿಯಾಗುವದು." ಎಂದು ನಾರದಮುನಿಯು ಅವನಿಗೆ ಹೇಳಿ, ಹರಸಿ, ಅನುಮತಿಯನ್ನು ತೆಗೆದುಕೊಂಡು, ದ್ವಾರಕೆಗೆ ತೆರಳಿದನು.

## ೩. ರಾಜಸೂಯ ಯಾಗಾರಂಭ.

ಇತ್ತ, ಧರ್ಮರಾಜನು ವ್ಯಾಸಮಹರ್ಷಿಗಳೊಡನೆಯೂ, ಕುಲಪುರೋಹಿತರಾದ ಧೌಮ್ಯರೊಡನೆಯೂ ಮಂತ್ರಾಲೋಚನೆ ಮಾಡಿ, ತಮ್ಮ ತಂದೆಯು ಅಪೇಕ್ಷಿಸಿದಂತೆ ರಾಜಸೂಯಯಾಗವನ್ನು ಮಾಡಬೇಕೆಂದು ನಿಶ್ಚಯಿಸಿ, ಶ್ರೀಕೃಷ್ಣನ ಸಹಾಯವಿಲ್ಲದೆ ನಿರ್ವಹಿಸಲು ಅಸಾಧ್ಯವೆಂದು ತಿಳಿದು, ಅವನನ್ನು ಕರೆದುಕೊಂಡು ಬರುವಂತೆ ಇಂದ್ರಸೇನನನ್ನು ದ್ವಾರಕೆಗೆ ಕಳುಹಿಸಿದನು. ಸೂತನು ಅತಿಶೀಘ್ರವಾಗಿ ದ್ವಾರವತಿಯನ್ನು ಸೇರಿ, ಯದುಕುಲಚೂಡಾಮಣಿಯಾದ ಶ್ರೀಕೃಷ್ಣನನ್ನು ಕಂಡು, ರಾಜನ ಆಜ್ಞೆಯನ್ನು ಬಿನ್ನವಿಸಲು; ಶ್ರೀಕೃಷ್ಣನು ಸಂತೋಷಿಸಿ, ದಿವ್ಯರಥವನ್ನೇರಿ, ಇಂದ್ರಸೇನನೊಡನೆ ಬಹಳ ವೇಗದಿಂದ ಧರ್ಮರಾಜನ ಪಟ್ಟಣಕ್ಕೆ ಬಂದು, ಅವನಿಂದ ಸತ್ಕೃತನಾಗಿ, ಅರ್ಜುನಾದಿಗಳನ್ನಾಲಿಂಗಿಸಿ, ಆಹ್ಲಾದದಿಂದ ಆಸ್ಥಾನದಲ್ಲಿ ಕುಳಿತುಕೊಂಡನು.

ಧರ್ಮರಾಜನು “ ಎಲೈ ಕೃಷ್ಣನೆ, ನಿನ್ನ ದರ್ಶನದಿಂದ ನಾವೆಲ್ಲರೂ ಕೃತಾರ್ಥರಾದೆವು. ಆದರೆ ನನ್ನದೊಂದು ಕೋರಿಕೆ ಇರುವದು. ಅದೇನೆಂದರೆ:— ಲೋಕದಲ್ಲಿ ಸದ್ವಂಶದಲ್ಲಿ ಜನಿಸಿ ಮಹಾಪರಾಕ್ರಮಶಾಲಿಯೆನ್ನಿಸಿಕೊಂಡದ್ದಕ್ಕೆ ಯಜ್ಞಾದಿಗಳನ್ನು ಮಾಡುವದೇ ಮುಖ್ಯಫಲವು. ಅವುಗಳಲ್ಲಿ ರಾಜಸೂಯವು ಮಹಾಫಲಪ್ರದವೆಂದು ಕೇಳಿರುವೆನು. ಅದನ್ನು ನಾನು ಮಾಡಬೇಕೆಂದಿರುವೆನು. ಆ ಯಜ್ಞವನ್ನು ಮಾಡಲು ಸಾಮಾನ್ಯನಿಗೆ ಸಾಧ್ಯವಲ್ಲ. ಇತರರೊಡನೆ ಆಲೋಚಿಸಲು: ಕೆಲವರು ಸ್ನೇಹದಿಂದ ದೋಷವನ್ನು ಮರಸಿ ಗುಣವನ್ನೇ ತೋರಿಸುವರು; ಮತ್ತು ಕೆಲವರು ಸ್ವಾರ್ಥಪರತೆಯಿಂದ ನನ್ನ ಇಷ್ಟವನ್ನೇ ಅನುವದಿಸುವರು; ಇನ್ನು ಕೆಲವರು ಗುಣದೋಷಗಳಲ್ಲಿ ಒಂದನ್ನೂ ಹೇಳದೆ ಅವಶ್ಯವಾಗಿಯೂ ಮಾಡಬಹುದೆಂದು ತಮ್ಮಿಚ್ಛೆ ಬಂದಂತೆ ಹೇಳುವರು. ಆದ್ದರಿಂದ ನಿನ್ನ ಡಿಪಾವರೆಯಲ್ಲಿ ಬಿನ್ನವಿಸಿರುವೆನು. ನೀನು ನಮಗೂ ಲೋಕಕ್ಕೂ ನಿರ್ವಾಹಕನಾಗಿರುವದರಿಂದ, ನಿನ್ನ ವಾಕ್ಯವೇ ಪ್ರವೃತ್ತಿಗೂ ನಿವೃತ್ತಿಗೂ ವೇದವಾಕ್ಯವಾಗಿರುವದರಿಂದ, ನಡೆಯತಕ್ಕ ವಿಚಾರದಲ್ಲಿ ಸಾಧಕಬಾಧಕಗಳನ್ನು ಅಪ್ಪಣೆಕೊಡಿಸಿ ಕಾಪಾಡಬೇಕು. ” ಎಂದು ಬಿನ್ನವಿಸಲು;

ಶ್ರೀಕೃಷ್ಣನಿಂತೆಂದನು:—

"ಎಲೈ ರಾಜನೆ, ನಿನ್ನಾಲೋಚನೆಯು ಉಚಿತವಾದದ್ದು. ನೀನಲ್ಲದೆ ಇನ್ನು ಯಾವ ರಾಜನು ತಾನೆ ಇಂಥಾ ಯಾಗವನ್ನೂ ಮಾಡಲಾಪನು? ಲೋಕದಲ್ಲಿರುವ ಸರ್ವರಾಜರನ್ನೂ ಜಯಿಸಿ, ತನ್ನ ಶಾಸನವನ್ನು ಹತ್ತು ದೆಸೆಯಲ್ಲಿಯೂ ನೆಲೆಗೊಳಿಸಿದವನು ಮಾಡತಕ್ಕ ಯಜ್ಞವಿದು. ಆದ್ದರಿಂದ ಹೇಳುವೆನು, ಕೇಳು. ಬೃಹದ್ರಥನ ಮಗನಾದ ಜರಾಸಂಧನೆಂಬುವನು ಶಿಶುಪಾಲ ದಂತವಕ್ರ ಹಂಸ ಡಿಬಿಕರೇ ಮೊದಲಾದವರ ಸಹಾಯದಿಂದ ಮಹೋದ್ಧತನಾಗಿ ಪಶ್ಚಿಮದೇಶದಲ್ಲಿ ಪ್ರಾಗ್ಜ್ಯೋತಿಷದಲ್ಲಿ ತಾನೇ ತಾನಾಗಿ ಆಳುತ್ತಾ, ನೆರೆಹೊರೆಯ ರಾಜಪುತ್ರರನ್ನೆಲ್ಲಾ ಸೆರೆಹಿಡಿದು, ವಜ್ರಪುರದ ಕಾಳಭೈರವನಿಗೆ ನಿಶ್ಯದಲ್ಲಿಯೂ ಒಬ್ಬೊಬ್ಬರ ಮೇರೆ ಬಲಿಕೊಡುತ್ತಾ ಮಹೋದ್ಧತನಾಗಿರುವನು. ಆ ಪಾಪಾತ್ಮನೊಬ್ಬನನ್ನು ಕೊಂದುಬಿಟ್ಟರೆ, ನಿನಗೆ ಸಕಲರಾಜರೂ ಅಧೀನರಾದ ಹಾಗೆಯೇ. ಆಮೇಲೆ ನೀನು ರಾಜಸೂಯಯಾಗವನ್ನು ನಿರ್ವಿಘ್ನವಾಗಿ ಮಾಡಬಹುದು. ಆದರೆ ಅವನಿಗೆ ಆಯುಧಗಳಿಂದ ಸಾವಿಲ್ಲವೆಂದು ಮಹೇಶ್ವರನ ವರವೊಂದುಂಟು; ಆದರೂ ಬಾಧೆ ಇಲ್ಲ. ನಮ್ಮ ಭೀಮಸೇನನ ಬಾಹುಪಾಶದಲ್ಲಿ ಸಿಕ್ಕಿದಮೇಲೆ ಜೀವದೊಡನೆ ಹೋಗಲಾರನು. ಇನ್ನೇನು, ನಿನ್ನ ಇಷ್ಟಾರ್ಥವೆಲ್ಲವೂ ಕೈಸೇರಿತು." ಎಂದನು.

ಅದಕ್ಕೆ ಯುಧಿಷ್ಠಿರನು "ಎಲೈ ಕೃಷ್ಣನೇ, ಸಾಮ್ರಾಜ್ಯಪದವಿಯನ್ನು ಬಯಸಿ, ಸ್ವಾರ್ಥಪರನಾಗಿ, ನಿಮ್ಮನ್ನು ಹ್ಯಾಗೆ ಕಳುಹಿಸಲಿ? ನನಗೆ ಭೀಮಾರ್ಜುನರಿಬ್ಬರೂ ಎರಡು ಕಣ್ಣುಗಳು. ನೀನು ನನ್ನ ಹೃದಯವು. ಈ ಮೂರು ಮಂದಿಗಳನ್ನು ಬಿಟ್ಟು, ಹ್ಯಾಗೆ ಇರಲಿ? ಅಪಾರವಾದ ಜರಾಸಂಧನ ಸೈನ್ಯದ ಬಲೆಗೆ ಸಿಕ್ಕಿ ಯಮನೂ ಕೂಡ ತಪ್ಪಿಸಿಕೊಳ್ಳಲಾರನು. ಹೀಗಿರುವಲ್ಲಿ ನೀವು ಹ್ಯಾಗೆ ತಪ್ಪಿಸಿಕೊಂಡು ಬರುವಿರಿ? ನನಗಾಗಿ ನಿಮ್ಮನ್ನು ಕಳುಹಿಸಿ ಅನರ್ಥಪರಂಪರೆಗಳಿಗೆ ಗುರಿಯಾಗುವದಕ್ಕಿಂತ ನಾನು ಸನ್ಯಾಸಿಯಾಗುವದೆ ಮೇಲು." ಎಂದು ಹೇಳಿದನು.

ಅದಕ್ಕೆ ಭೀಮಸೇನನು ಧರ್ಮರಾಜನನ್ನು ನೋಡಿ, "ಮನುಷ್ಯನು ಎಷ್ಟು ಸಮರ್ಥನಾದರೂ ಕೆಲಸಮಾಡುವದಕ್ಕೆ ಯತ್ನಿಸದೆ ಇದ್ದರೆ, ಅವನಿಗೆಂದಿಗೂ

ಐಶ್ವರ್ಯವೂ ಕೀರ್ತಿಯೂ ಕೈಸೇರುವದಿಲ್ಲ. ಎಂಥಾ ಬಲಹೀನನಾದರೂ ಸರಿಯೆ, ಪ್ರಾರಂಭಮಾಡಿದ ಕೆಲಸಕ್ಕೆ ಎಷ್ಟೆಷ್ಟು ವಿಘ್ನಗಳು ಅಡ್ಡಲಾಗಿ ಬಂದರೂ ಹಿಂಜರಿಯದೆ ಪೂರಯಿಸಿದರೆ, ಎಂಥಾ ಬಲಿಷ್ಠರನ್ನೂ ಜಯಿಸುವನು. ಬಲಿಷ್ಠನೊಡನೆ ಜಗಳವಾಡಿ ಸೋತರೂ ಸಾಕು. ಹೇಡಿಯೊಡನೆ ಗುದ್ದಾಡಿ ಗೆದ್ದರೂ ಪ್ರಯೋಜನವಿಲ್ಲ. ನಿನ್ನ ಅನುಗ್ರಹವೂ, ಅರ್ಜುನನ ಸಹಾಯವೂ, ಶ್ರೀಕೃಷ್ಣನ ಕರುಣೆಯೂ ಇದ್ದಲ್ಲಿ, ಹ್ಯಾಗಾದರೂ ಆ ದುರಾತ್ಮನನ್ನು ಕೊಲ್ಲುವೆನು. ನಾವು ಮೂವರೂ ನಿನ್ನ ಯಜ್ಞವನ್ನು ಮೂರು ಅಗ್ನಿಗಳಂತೆ ನಡಿಸುವೆವು. ಜರಾಸಂಧನೆಂಬ ಪಶುವನ್ನು ನನ್ನ ಬಾಹುಬಲನೆಂಬ ಬೆಂಕಿಗೆ ಆಹುತಿ ಕೊಡುವೆನು." ಎಂದು ಹೇಳಿದನು.

ಆ ಬಳಿಕ ಅರ್ಜುನನು "ರಾಜನೇ, ರಾಜಸೂಯ ಯಾಗವನ್ನು ಮಾಡು. ನನ್ನ ಗಾಂಡೀವವೂ ಅಕ್ಷಯತೂಣೀರವೂ ಸಾರ್ಥಕವಾಗಲಿ. ಶೌರ್ಯವಿಲ್ಲದಿದ್ದರೆ, ಕುಲವೂ, ರೂಪವೂ, ಸಂಪತ್ತೂ, ಹೆಣಕ್ಕಿಟ್ಟ ಆಭರಣದಂತಾಗುವವು. ರಾಜಸೂಯಯಾಗದ ನಿಮಿತ್ತದಿಂದ ಮಾಗಧನನ್ನು ಕೊಂದು, ಆತನ ಸೆರೆಯಲ್ಲಿ ನರಳುತ್ತಿರುವ ನೃಪಕುಮಾರರನ್ನು ಬಿಡಿಸಿದನೆಂಬ ಕೀರ್ತಿಯೇ ನನಗೆ ಸಾಕು. ಇದಕ್ಕಿಂತ ಹೆಚ್ಚಾಗಿ ನಾನು ಮಾಡತಕ್ಕ ಧರ್ಮಕೆಲಸವೇನಿರುವದು?" ಎಂದು ಹೇಳಿದನು.

ಹೀಗೆ ಭೀಮಾರ್ಜುನರು ನುಡಿದ ವೀರವಾದಗಳಿಗೆ ಮೆಚ್ಚಿ, ಶ್ರೀಕೃಷ್ಣನು "ಧೈರ್ಯವೂ, ಬುದ್ಧಿಯೂ ಉಳ್ಳವನು ಲೋಕಕ್ಕೆ ಉಪಕಾರಮಾಡುವದರಲ್ಲಿ ಪ್ರವರ್ತಿಸಿದರೆ, ದೈವವೇ ಅವನಿಗೆ ಸಹಾಯವಾಗುವದು. ದಡದ ಮರವನ್ನು ಬೇರುಸಹಿತ ನದಿಯು ಉರುಳಿಸುವ ಹಾಗೆ, ಜರಾಸಂಧನನ್ನು ನಿರ್ಮೂಲಮಾಡುವೆವು." ಎಂದನು.

"ಅಯ್ಯಾ, ದನುಜವೈರಿ, ನಿನ್ನೊಡನೆ ಕಾದಿಯೂ ದೀಪದಲ್ಲಿ ಬಿದ್ದ ಮಿಡತೆಯ ಹಾಗಾಗೆದ ಆ ಜರಾಸಂಧನ ಪರಾಕ್ರಮವು ಎಷ್ಟು ಅದ್ಭುತವಾದ್ದು! ಅವನು ಇಷ್ಟು ಬಲವನ್ನು ಪಡೆದದ್ದು ಹ್ಯಾಗೆ? ಅವನು ಹುಟ್ಟಿದ್ದು ಹ್ಯಾಗೆ? ಹೇಳಬೇಕು." ಎಂದು ಧರ್ಮರಾಜನು ಕೇಳಿದನು.

ಶ್ರೀಕೃಷ್ಣನಿಂತೆಂದನು:—“ಜರಾಸಂಧನ ಉತ್ಪತ್ತಿಯನ್ನು ಕೇಳು. ಇವನ ತಂದೆಯಾದ ಬೃಹದ್ರಥನು ಲೆಕ್ಕವಿಲ್ಲದ ದಳಕ್ಕೆ ಪತಿಯಾಗಿ, ಮಗಧದೇಶವನ್ನು ಧರ್ಮದಿಂದ ಕಾಪಾಡುತ್ತಿದ್ದು, ಕಾಶೀರಾಜನ ಇಬ್ಬರು ಪುತ್ರಿಯರನ್ನು ಮದುವೆಯಾಗಿ, ಅತ್ಯಂತಸುಖವನ್ನು ಅನುಭವಿಸುತ್ತಾ, ಮಕ್ಕಳಿಲ್ಲದೆ ಪುತ್ರಕಾಮೇಷ್ಟಿಯನ್ನು ಮಾಡಿ, ಮಾಡಿಯೂ ಮಕ್ಕಳನ್ನು ಪಡೆಯದೆ, ಸಂತತಿಯಿಲ್ಲದ ಸಂಪತ್ತು ವ್ಯರ್ಥವೆಂದೆಣಿಸಿ, ಎಲ್ಲವನ್ನೂ ತೊರೆದು, ತನ್ನ ಪತ್ನಿಗಳೊಡನೆ ಕಾಡಿಗೆ ಹೋಗಿ, ಅಲ್ಲಲ್ಲಿ ಮುನಿಗಳ ಸಂದರ್ಶನವನ್ನು ಮಾಡುತ್ತಾ ಮಾಡುತ್ತಾ, ಒಂದು ದಿವಸ ಒಂದು ಮರದ ಕೆಳಗೆ ಉರಿಯುವ ಬೆಂಕಿಯಂತೆ ತೇಜೋವಂತನಾಗಿ, ತಪಸ್ಸು ಮಾಡುತ್ತಿದ್ದ ಚಂಡಕೌಶಿಕನೆಂಬ ಮುನಿಯನ್ನು ನೋಡಿ, ಬಹುಭಯಭಕ್ತಿಯಿಂದ ಬಹುಕಾಲದವರೆಗೂ ಆತನಿಗೆ ಸೇವೆಯನ್ನು ಮಾಡುತ್ತಾ ಬಂದು, ತನ್ನ ಸೇವೆಗೆ ಮೆಚ್ಚಿ ‘ಬೇಕಾದ ವರವನ್ನು ಬೇಡು. ಕೊಡುವೆನು.’ ಎಂದು ಹೇಳಿದ ಆ ಮುನಿಗೆ ಸಾಷ್ಟಾಂಗವೆರಗಿ, ‘ಸ್ವಾಮೀ, ಸಕಲಸಂಪತ್ತಿದ್ದೂ ಸಂತಾನವಿಲ್ಲದೆ ತಪಸ್ಸುಮಾಡಬೇಕೆಂದು ಇಲ್ಲಿಗೆ ಬಂದ ನನಗೆ ಮಕ್ಕಳಾಗುವಂತೆ ಅನುಗ್ರಹ ಮಾಡಬೇಕು’ ಎಂದು ಬೇಡಿಕೊಂಡು, ಆ ಮುನಿಯು ಅನುಗ್ರಹಿಸಿ ಕೊಟ್ಟ ಹಣ್ಣನ್ನು ಸಮವಾಗಿ ಎರಡು ಭಾಗಮಾಡಿ ಅದರಲ್ಲಿ ಒಂದೊಂದನ್ನು ಒಬ್ಬೊಬ್ಬಳಿಗೆ ಕೊಟ್ಟನು. ಅವರಿಬ್ಬರೂ ಗರ್ಭವನ್ನು ಧರಿಸಿ, ಒಬ್ಬೊಬ್ಬರು ಒಂದು ಶಿಶುವಿನ ಅರ್ಧಅರ್ಧದೇಹವನ್ನು ಹೆತ್ತು, ಜೀವವಿಲ್ಲದರಿಂದ ಅವುಗಳನ್ನು ಹೊರಗೆ ದುಃಖದಿಂದ ಬೀಸಾಡಿದರು. ಆಗ ಮಾಂಸಾಶಿನಿಯಾದ ಜರೆಯೆಂಬ ಗೃಹರಾಕ್ಷಸಿಯು ಅವುಗಳನ್ನು ತಿನ್ನಬೇಕೆಂಬ ಕುತೂಹಲದಿಂದ ಆ ಯೆರಡು ಅರ್ಧಗಳನ್ನು ಒಟ್ಟಾಗಿ ಸೇರಿಸಿದಳು. ಕೂಡಲೆ ಆ ಶಿಶುವಿಗೆ ಸತ್ವವುಂಟಾಗಲು, ಆ ರಾಕ್ಷಸಿಯು ಆ ಮಗುವನ್ನು ಎತ್ತಿಕೊಂಡುಹೋಗಿ, ಬೃಹದ್ರಥನಿಗೆ ಕೊಟ್ಟಳು. ಬೃಹದ್ರಥನು ಜರೆಯಿಂದ ರಕ್ಷಿತನಾದ್ದರಿಂದ, ಮಗನಿಗೆ ಜರಾಸಂಧನೆಂದು ಹೆಸರಿಕ್ಕಿ, ಬಹುಪ್ರೀತಿಯಿಂದ ಕಾಪಾಡುತ್ತಾ ಬಂದನು. ಹೀಗಿರಲು, ಒಂದು ದಿನ ಚಂಡಕೌಶಿಕ ಮುನಿಯು ಬಂದು ಆ ಮಗುವನ್ನು ನೋಡಿ, ‘ಇವನು ಶಿವನನ್ನು ಮೆಚ್ಚಿಸಿ, ಅಸ್ತ್ರಶಸ್ತ್ರಗಳಿಂದ ಹತನಾಗದಹಾಗೆ ವರವನ್ನು ಪಡೆಯುವನು. ಇವನೊಡನೆ

ಯುದ್ಧಕ್ಕೆ ಬಂದ ಶತ್ರುಗಳೆಲ್ಲಾ ಭಸ್ಮವಾಗುವರು. ಇವನನ್ನು ಇದಿರಿಸಿದ ಅರಸರು ಗರುಡನನ್ನು ಇದಿರಿಸಿದ ಕ್ಷುದ್ರಪಕ್ಷಿಗಳಂತಾಗುವರು. ಇವನಲ್ಲಿ ಪ್ರಯೋಗಿಸಿದ ಅಸ್ತ್ರಗಳು ಗಂಡಶೈಲದಮೇಲೆ ಬಿದ್ದ ಕ್ಷುದ್ರನದಿಯಂತಾಗುವವು. ಎಲ್ಲಾ ಹೊಳೆಗಳೂ ಸಮುದ್ರಕ್ಕೆ ಸೇರುವ ಹಾಗೆ ಸಕಲಭೂಪತಿಗಳ ರಾಜ್ಯಲಕ್ಷ್ಮಿಯೂ ಇವನನ್ನು ಸೇರುವದು.' ಎಂದು ಬೃಹದ್ರಥನಿಗೆ ಹೇಳಿ ಹೊರಟುಹೋದನು. ಕೆಲವುಕಾಲ ಕಳೆದಮೇಲೆ ಮಗನಿಗೆ ಪಟ್ಟಾಭಿಷೇಕವನ್ನು ಮಾಡಿ, ಬೃಹದ್ರಥನು ತಪೋವನಕ್ಕೆ ತೆರಳಿದನು. ಬಳಿಕ ಜರಾಸಂಧನು ಈಶ್ವರನನ್ನು ತಪಸ್ಸಿನಿಂದ ಮೆಚ್ಚಿಸಿ, ಅಮೋಘವಾದ ವರಗಳನ್ನು ಪಡೆದು ಕೆಚ್ಚಿನಿಂದ ಬೆರೆಯುತ್ತಿದ್ದನು. ಈಗ ಹಂಸಡಿಬಕರೆಂಬ ಅವನ ದಳಪತಿಗಳೂ, ಅವನ ಅಳಿಯನಾದ ಕಂಸನೂ, ಕಾಲವಶರಾದ್ದರಿಂದ, ಗರಿಮುರಿದ ಪಕ್ಷಿಯಂತಿರುವನು. ಈಗ ಅವನನ್ನು ಜಯಿಸುವದು ಒಂದು ಅಸಾಧ್ಯವಾದ ಕೆಲಸವಲ್ಲ. ಭೀಮನಲ್ಲಿ ಬಾಹಾಬಲವೂ, ನನ್ನಲ್ಲಿ ನೀತಿಬಲವೂ, ಅರ್ಜುನನಲ್ಲಿ ಅಸ್ತ್ರಬಲವೂ ಇರುವವರೆಗೂ ನಿನಗೆ ಯಾರುತಾನೆ ಇದಿರು? ನೀನು ಯಾರನ್ನುತಾನೆ ತುಳಿದುಬಿಡಲಾರೆ? ನಿನಗೆ ನನ್ನ ಮಾತಿನಲ್ಲಿ ನಂಬಿಕೆ ಇದ್ದರೆ, ಭೀಮಾರ್ಜುನರನ್ನು ನನ್ನೊಡನೆ ಕಳುಹಿಸಿಕೊಡು." ಎಂದನು.

## ಜರಾಸಂಧವಧೆ.

ಈ ರೀತಿಯಲ್ಲಿ ನುಡಿಯುತ್ತಿರುವ ಕೃಷ್ಣಸ್ವಾಮಿಯನ್ನು ನೋಡಿ, "ಎಲೈ ಕೃಷ್ಣನೇ, ನೀನೇ ನಮಗೆ ಗತಿ, ನಿನ್ನನ್ನೇ ಸರ್ವವಿಧದಲ್ಲಿಯೂ ನಂಬಿರುವೆವು. ನೀನೂ ಹೀಗೆ ಹೇಳುವದು ನಿನಗೆ ತಕ್ಕದ್ದಲ್ಲ. ನಿನ್ನ ಅನುಗ್ರಹವೊಂದಿದ್ದರೆ ಸಾಕು; ಜರಾಸಂಧನು ಮಡಿದಹಾಗೆಯೆ, ನಾನು ರಾಜಸೂಯವನ್ನು ಮಾಡಿದಹಾಗೆಯೆ. ನೀನೂ ಅರ್ಜುನನೂ ಸೇರಿದರೆ ಆಗದ ಕೆಲಸವೇನಿರುವದು? ನಿಮ್ಮಿಬ್ಬರ ಸಹಾಯವು ಒದಗಿದರೆ, ಭೀಮಸೇನನಿಗೆ ನೆನೆದ ಕಾರ್ಯವೆಲ್ಲಾ ಕೈಗೂಡುವದು. ಜರಾಸಂಧನನ್ನು ಜಯಿಸುವದು ಅವನಿಗೆ ಅತಿಶಯವಲ್ಲ." ಎಂದು ವಿಜ್ಞಾಪಿಸಿ, ಧರ್ಮರಾಜನು ಭೀಮಾರ್ಜುನರನ್ನು ಶ್ರೀಕೃಷ್ಣನಿಗೆ ಒಪ್ಪಿಸಿದನು.

ಬಳಿಕ ಶ್ರೀಕೃಷ್ಣನು ಬ್ರಾಹ್ಮಣವೇಷವನ್ನು ಧರಿಸಿ, ತನ್ನಂತೆ ವೇಷಧಾರಿಗಳಾದ ಭೀಮಾರ್ಜುನರನ್ನು ಕರೆದುಕೊಂಡು ಕುರುಜಾಂಗಲದೇಶದ ಮಾರ್ಗವಾಗಿ ಹೊರಟು, ಪದ್ಮಸರವನ್ನು ಸೇರಿ, ಗಂಡಕೀಶೋಣಾಸರಯೂನದಿಗಳನ್ನು ಹಾಯ್ದು, ಕೋಸಲದೇಶವನ್ನು ದಾಟಿ, ಮಿಥಿಲೆಯನ್ನು ಹಿಂದೆ ಬಿಟ್ಟು, ಗಂಗಾನದಿಯನ್ನು ಅತಿಕ್ರಮಿಸಿ, ಕಡೆಗೆ ಮಗಧದೇಶವನ್ನು ಪ್ರವೇಶಿಸಿ, ಗೋರಥವೆಂಬ ಬೆಟ್ಟಕ್ಕೆ ಹತ್ತಿ, ಅಲ್ಲಿ ನಿಂತು, ಗಿರಿವ್ರಜವೆಂಬ ಜರಾಸಂಧನ ಪಟ್ಟಣವನ್ನು ಕಂಡರು. ಆಗ ಶ್ರೀಕೃಷ್ಣನು ಅದರ ಸೌಂದರ್ಯಕ್ಕೂ ಸಮೃದ್ಧಿಗೂ ಆಶ್ಚರ್ಯಪಟ್ಟು, “ ಎಲೈ ಭೀಮಾರ್ಜುನರಿರಾ, ಈ ಪಟ್ಟಣದ ಸೊಬಗನ್ನು ನೋಡಿದಿರಾ? ಗೋರಥ, ಋಷಭ, ವೈಹಾರ, ಋಷಿಗಿರಿ, ಚೈತ್ರಕಾದ್ರಿಗಳೆಂಬ ಈ ಪರ್ವತಗಳೇ ಇದಕ್ಕೆ ಕೋಟೆಯಾಗಿರುವವು. ಆದ್ದರಿಂದಲೇ ಇದಕ್ಕೆ ಗಿರಿವ್ರಜವೆಂದು ಹೆಸರಾಯಿತು. ಇಲ್ಲಿ ಗೌತಮನು ತನ್ನ ಪತ್ನಿಯಾದ ಔಶೀನರಿಯಲ್ಲಿ ಹದಿನಾರು ಋಷಿಗಳನ್ನು ಪಡೆದನು. ಆ ಋಷಿಗಳ ಪ್ರಭಾವದಿಂದಲೂ, ಇದರ ಸ್ಥಾನಬಲದಿಂದಲೂ, ಇಲ್ಲಿನ ರಾಜರುಗಳು ಅಜೇಯರಾಗಿರುವರು. ಇದೇ ಅಂಗವಂಗಾಧಿಪತಿಗಳಿಗೆ ಪೂರ್ವದ ವಿಹಾರಸ್ಥಾನವಾಗಿತ್ತು. ಇಗೋ, ಮಾರ್ಗದಲ್ಲಿ ಜನಗಳ ಸಂದಣಿಯನ್ನು ನೋಡಿ. ಉತ್ಸವದ ಬೊಬ್ಬೆಯು ಕೇಳಿಸುವದು.” ಎಂದು ಹೇಳುತ್ತಾ, ಪುರದ್ವಾರದ ಬಳಿಗೆ ಬಂದು, ಅಲ್ಲಿ ಪಟ್ಟಣವನ್ನು ಹೊಗದೆ, ಚೈತ್ರಗಿರಿಯನ್ನೇರಿದನು. ಅಲ್ಲಿ ಮೂರು ದೊಡ್ಡ ಭೇರಿಗಳಿದ್ದವು. ಅವುಗಳನ್ನು ಭೀಮಾರ್ಜುನರಿಗೆ ತೋರಿಸಿ, “ ಇಗೋ, ಈ ಭೇರಿಗಳು ತಮಗೆ ತಾವೇ ಧ್ವನಿಮಾಡಿ ಹಗೆಗಳು ಬಂದಿದಾರೆಂದು ರಾಜನಿಗೆ ಸೂಚಿಸುವವು. ಕೂಡಲೆ ರಾಜನು ಸೈನ್ಯದೊಡನೆ ಬರುವನು. ಇವುಗಳನ್ನು ಹಿಂದೆ ಇಲ್ಲಿದ್ದ ನರಮಾಂಸಭಕ್ಷಕನಾದ ವೃಷಭಾಸುರನನ್ನು ಕೊಂದು ಅವನ ಚರ್ಮದಿಂದ ಜಯದ್ರಥನುಮಾಡಿದನು. ಇವುಗಳು ಶತ್ರುಗಳು ಬಂದರೆ, ಆ ಋಷಿಗಳ ಪ್ರಭಾವದಿಂದ ತಮಗೆ ತಾವೇ ಶಬ್ದಮಾಡುವವು.” ಎಂದು ಹೇಳಿ, ಮುಷ್ಟಿಪ್ರಹಾರದಿಂದ ಒಂದನ್ನು ಒಡೆಯಲು; ಭೀಮಾರ್ಜುನರು ಅವನಂತೆಯೇ ಉಳಿದ ಎರಡು ಭೇರಿಗಳನ್ನೂ ಒಡೆದುಹಾಕಿದರು. ಬಳಿಕ ಈ ಮೂವರೂ ಅಲ್ಲಿದ್ದ ಪೂಜಾರ್ಹವಾದ

ಮಹಾಶೃಂಗವನ್ನು ಕೈಗಳಿಂದ ಕೆಡಹಿ, ಅಲ್ಲಿನ ಬಾಗಲಲ್ಲಿ ಪುರವನ್ನು ಪ್ರವೇಶ ಮಾಡಿ, ಲಕ್ಷ್ಮೀದೇವಿಗೆ ನಾಟ್ಯಸ್ಥಾನವಾಗಿ ಸಕಲವಸ್ತುಸಮೃದ್ಧಿಯನ್ನು ಹೊಂದಿರುವ ಅಂಗಡಿಸಾಲುಗಳ ಸೊಬಗನ್ನು ನೋಡುತ್ತಾ, ರಾಜಮಾರ್ಗದಲ್ಲಿ ಹೊರಟು, ಅಲ್ಲಿ ಹೂವಾಡಿಗನ ಮನೆಗೂ, ಗಂಧಗಳನ್ನು ಮಾರುವವನ ಮನೆಗೂ ಹೊಕ್ಕು, ಸರಗಳನ್ನೂ, ಪರಿಮಳದ್ರವ್ಯಗಳನ್ನೂ ತೆಗೆದುಕೊಂಡು, ಅವುಗಳಿಂದ ಲಂಕೃತರಾಗಿ ಹೋಗುತ್ತಿರಲು; ಪೌರಜನಗಳು ಇವರ ವೇಷವನ್ನೂ ಸಾಲ ವೃಕ್ಷದ ಶಾಖೆಯಂತೆ ದೃಢವಾಗಿಯೂ ಧೀರ್ಘವಾಗಿಯೂ ಇರುವ ಬಾಹುಗಳನ್ನೂ ವಿಶಾಲವಾದ ವಕ್ಷಸ್ಥಳವನ್ನೂ ನೋಡಿನೋಡಿ ವಿಸ್ಮಯಪಡುತ್ತಿದ್ದರು. ಈ ರೀತಿಯಲ್ಲಿ ಹೋಗಿ, ಯಾವಾಗಲೂ ಬ್ರಾಹ್ಮಣರಿಗೆ ಅಡ್ಡಿಯಿಲ್ಲದ ಬಾಗಲಿಂದ ಅರಮನೆಯ ಗೋವಾಸವನ್ನು ಸಿಂಹಗಳು ಗುಹೆಯನ್ನು ಪ್ರವೇಶಿಸುವಂತೆ ಪ್ರವೇಶಿಸಿ, ದ್ವಾರಪಾಲಕರನ್ನು ಲಕ್ಷ್ಯಮಾಡದೆ ನೆಟ್ಟಗೆ ಹಜಾರಗಳನ್ನು ದಾಟಿ, ಪ್ರಭುವಿನ ಸಂದರ್ಶನ ಯಾವಾಗ ತಮಗುಂಟಾಗುವದೋ ಎಂದು ಸಮಯ ನಿರೀಕ್ಷಣಮಾಡುತ್ತಿದ್ದ ಪೌರಜನಗಳು ಆಶ್ಚರ್ಯದಿಂದ ನೋಡುತ್ತಿರುವ ಹಾಗೆ ಬಹುಗರ್ವದೊಡನೆ ಜರಾಸಂಧನ ಸಮೀಪದಲ್ಲಿ ಬಂದು ನಿಂತರು.

ಜರಾಸಂಧನು ಬ್ರಾಹ್ಮಣರೆಂದೇ ಭಾವಿಸಿ ಇದಿರೆದ್ದು ಬಂದು ಪೂಜಿಸಿ, "ನಿಮಗೆ ಸುಖಾಗಮನವೇ?" ಎಂದು ಕೇಳಲು; ಭೀಮಾರ್ಜುನರು ಯಾವ ಪ್ರತ್ಯುತ್ತರವನ್ನು ಕೊಡದೆ ಸುಮ್ಮನಿದ್ದರು. ಶ್ರೀಕೃಷ್ಣನು "ಎಲೈ ರಾಜನೇ, ನಿಯಮದಲ್ಲಿರುವದರಿಂದ ಮಾತನಾಡಲಿಲ್ಲ. ಅರ್ಧ ರಾತ್ರಿಯಾದಮೇಲೆ ನಿನ್ನೊಡನೆ ಮಾತನಾಡುವರು." ಎಂದು ಹೇಳಿದನು. "ಹಾಗಾದರೆ ತಾವು ಆದುವರೆಗೂ ಯಜ್ಞಾಗಾರದಲ್ಲಿ ದಯಮಾಡಿಸಿರಬೇಕು. ಅನಂತರದಲ್ಲಿ ನಾನು ಬಂದು ತಮಗೆ ಸತ್ಕಾರವನ್ನು ಯಥಾಶಕ್ತಿ ಮಾಡಿ ಕೃತಾರ್ಥನಾಗುವೆನು." ಎಂದು ಹೇಳಿ ತನ್ನ ಆವಾಸಕ್ಕೆ ತೆರಳಿದನು.

ಅರ್ಧರಾತ್ರಿಯಾದ ಬಳಿಕ, ತನ್ನ ಆಗಮನವನ್ನೇ ನಿರೀಕ್ಷಿಸುತ್ತಿದ್ದ ವಿಪ್ರರನ್ನು ಸತ್ಕರಿಸಬೇಕೆಂಬ ಕುತೂಹಲದಿಂದ ಹೊರಟು, ಬ್ರಾಹ್ಮಣಪೂಜೈಕನಿರತನಾದ ಜರಾಸಂಧನು, ಅವರಿದ್ದೆಡೆಗೆ ಬಂದು ಅರ್ಘ್ಯಪಾದ್ಯಾದಿಗಳನ್ನು ಸಮರ್ಪಿಸಿದನು.

ಆವರು ಅವುಗಳನ್ನು ಅಂಗೀಕರಿಸದೆ ಕುಳಿತಿರಲು, ನೋಡಿ ವಿಸ್ಮಿತನಾಗಿ, "ಅಯ್ಯಾ, ನಿಮ್ಮ ಸ್ನಾತಕವೇಷವೇನು? ಹೀಗೆ ಗಂಧಮಾಲ್ಯಗಳಿಂದಲಂಕೃತರಾಗಿರುವದೇನು? ಸ್ನಾತಕವ್ರತಮಾಡುವ ಬ್ರಾಹ್ಮಣರು ಗಂಧಪುಷ್ಪಗಳನ್ನು ಧರಿಸುವದಿಲ್ಲವೆಂದು ಕೇಳಿರುವೆನು. ನಿಮ್ಮ ವೇಷವನ್ನು ನೋಡಿದರೆ ಬ್ರಾಹ್ಮಣರ ಹಾಗೆಯೂ, ಜ್ಯಾಕಿಣಾಂಕಿತವಾದ ಬಾಹುಗಳನ್ನೂ ನಿಮ್ಮ ವಿಶಾಲವಾದ ಉರಸ್ಥಳವನ್ನೂ ನೋಡಿದರೆ ಕ್ಷತ್ರಿಯರ ಹಾಗೆಯೂ ತೋರುವದು. ಅಲ್ಲದೆ ನೀವು ಚೈತ್ಯಶೃಂಗವನ್ನು ಒಡೆದು, ಕೃತ್ರಿಮದ್ವಾರದಲ್ಲಿ ಪ್ರವೇಶಿಸಿ, ಇಲ್ಲಿಗೆ ಬಂದಿರುವಿರಿ. ನಾನು ಕೊಟ್ಟ ಪೂಜೆಗಳನ್ನೂ ಕೈಕೊಳ್ಳುವದಿಲ್ಲ. ನೀವು ಯಾರು? ನಿಮಗೆ ನನ್ನಿಂದಾಗಬೇಕಾದ ಕಾರ್ಯವೇನು?" ಎಂದು ಕೇಳಿದನು.

ವಾಸುದೇವನು "ನಾವು ಬ್ರಾಹ್ಮಣರಲ್ಲ. ಕ್ಷತ್ರಿಯಸ್ನಾತಕರು. ವಿಶೇಷವಾದ ನಿಯಮಗಳು ಬ್ರಾಹ್ಮಣರಿಗೆ ಹೇಳಿರುವವಲ್ಲದೆ ಕ್ಷತ್ರಿಯರಿಗೆ ಹೇಳಿಲ್ಲ. ಸ್ರಕ್ಚಂದನಗಳಲ್ಲಿ ಲಕ್ಷ್ಮಿಯಿರುವದರಿಂದ ಅವುಗಳಿಂದಲಂಕೃತರಾಗಿರುವೆವು. ಸ್ನೇಹಿತನ ಮನೆಯನ್ನು ಸರಿಯಾದ ಬಾಗಲಿಂದಲೂ, ಹಗೆಯ ಮನೆಯನ್ನು ಸರಿಯಲ್ಲದ ಮಾರ್ಗದಿಂದಲೂ ಪ್ರವೇಶಿಸುವದು ಧರ್ಮವಾದ್ದರಿಂದ ಕೃತ್ರಿಮದ್ವಾರದಿಂದ ಬಂದೆವು. ನಾವು ನಿನ್ನ ಪೂಜೆಯನ್ನು ಕೋರಿ ಬರಲಿಲ್ಲ. ಆದ್ದರಿಂದಲೇ ನಿನ್ನ ಪೂಜೆಯನ್ನು ಅಂಗೀಕರಿಸಲಿಲ್ಲ." ಎಂದು ಹೇಳಿದನು.

"ಎಲೈ ಅಭ್ಯಾಗತರಿರಾ, ಯಾವ ಕಾಲದಲ್ಲಿ ಯಾತಕ್ಕೋಸ್ಕರ ನಮಗೂ ನಿಮಗೂ ವೈರವುಂಟಾಯಿತೆಂದು ಎಷ್ಟೆಷ್ಟು ಯೋಚಿಸಿದರೂ ಗೊತ್ತಾಗಲಿಲ್ಲ. ನಾನು ನಿಮಗೆ ಯಾವ ಅಪಕಾರವನ್ನೂ ಮಾಡಿದವನಲ್ಲ. ನೀವು ನನಗೆ ಅಪಕಾರ ಮಾಡಿದಹಾಗೆ ಜ್ಞಾಪಕವೂ ಇಲ್ಲ. ಹೀಗಿರುವಲ್ಲಿ ನನ್ನನ್ನು ಶತ್ರುವೆಂದು ಹೇಳುವದಕ್ಕೆ ಕಾರಣವೇನು? ನಾನು ಸ್ವಧರ್ಮಾನುಷ್ಠಾನದಲ್ಲಿಯೂ, ಪ್ರಜಾಪರಿಪಾಲನಾದಿ ಕಾರ್ಯಗಳಲ್ಲಿಯೂ, ಧರ್ಮವನ್ನೇ ಮುಂದಿಟ್ಟುಕೊಂಡು ಜಾಗರೂಕನಾಗಿ ನಡೆಯುತ್ತಿರುವೆನು. ನಿರ್ದೋಷಿಯಾದ ನನ್ನಲ್ಲಿ ದೋಷಾರೋಪಣೆ ಮಾಡಿದ್ದಕ್ಕಾಗಿ ನನಗೆ ಬಹಳ ಸಂತಾಪವಾಗುತ್ತದೆ. ಬಹುಶಃ ತಿಳಿಯದೆ ಅಜ್ಞಾನದಿಂದ ಹೀಗೆ ಹೇಳುವಿರಿ." ಎಂದನು.

"ಎಲೈ ರಾಜನೆ, ನಾವು ಪ್ರಮಾದದಿಂದ ಹೇಳತಕ್ಕವರಲ್ಲ. ನೀನು ತಪ್ಪು ಮಾಡದವನೆಂದು ಹೇಳುತ್ತೀಯಲ್ಲ; ಸ್ವಪ್ರಯೋಜನಕ್ಕಾಗಿ ರಾಜಶ್ರೇಷ್ಠರನ್ನೆಲ್ಲಾ ಸೆರೆಹಿಡಿದು ನಿನ್ನ ಹಾಗೆ ಪೂರ್ವದಲ್ಲಿ ಯಾರು ಬಲಿಗೊಡುತ್ತಿದ್ದರು? ಲೋಕದಲ್ಲಿ ಇದಕ್ಕಿಂತ ಹೆಚ್ಚಾದ ಪಾತಕವೇನು? ನಮ್ಮನ್ನು ಯಾರೆಂದು ಬಲ್ಲೆ? ರಾಜಕುಲದ ಶ್ರೇಯಸ್ಸನ್ನೇ ನಿರೀಕ್ಷಿಸುವ ಒಬ್ಬ ಮಹಾಪುರುಷನು ನೀನು ಮಾಡುತ್ತಿರುವ ತಪ್ಪುಗಳನ್ನು ತಿಳಿದನು. ಆತನೇ ನಮ್ಮನ್ನು ಇಲ್ಲಿಗೆ ಕಳುಹಿರುವನು. ನಮಗೆ ನಿಗ್ರಹಾನುಗ್ರಹಾಧಿಕಾರವನ್ನೂ ಕೊಟ್ಟಿರುವನು. ಧರ್ಮಸ್ಥಾಪನಾರ್ಥವಾಗಿಯೇ ನಾವು ಸಂಚರಿಸುತ್ತಿರುವೆವು. ನೀನು ರುದ್ರಪೂಜಾ ವ್ಯಾಜದಿಂದ ಮನುಷ್ಯವಧೆಯನ್ನು ಮಾಡುತ್ತಾ ಇರುತ್ತೀಯೆ. ಆದಕಾರಣ ನೀನು ಮಾಡುವ ಕೆಲಸಕ್ಕೆ ತಕ್ಕಂತೆಯೇ ಫಲವನ್ನನುಭವಿಸುತ್ತೀಯೆ. ನೀಚ ಕೃತ್ಯಗಳನ್ನು ಮಾಡುತ್ತಿರುವ ನಿನಗೆ ಎಂದಿಗೂ ಉತ್ತಮಗತಿ ಬರುವದಿಲ್ಲ. ನಿನಗೆ ಸಾಟಿಯಾದ ಅರಸು ಒಬ್ಬನೂ ಇಲ್ಲವೆಂದು ಕೊಬ್ಬಿದ್ದೀಯೆ. ನೀನು ರಾಜಪುತ್ರರನ್ನು ಅನ್ಯಾಯವಾಗಿ ಕೊಲ್ಲುತ್ತೀಯೆ. ಇದು ನ್ಯಾಯವಲ್ಲ. ನಮ್ಮ ಹಿತೋಕ್ತಿಯನ್ನು ಕೇಳು. ಅನ್ಯಾಯವಾಗಿ ಪುತ್ರಕಳತ್ರಾದಿಗಳೊಡನೆ ಯಮಲೋಕಕ್ಕೆ ಹೋಗಬೇಡ. ಪೂರ್ವದಲ್ಲಿ ನಿನ್ನಂತೆಯೇ ಕಾರ್ತವೀರ್ಯಾರ್ಜುನನೇ ಮೊದಲಾದವರು ಧರ್ಮವನ್ನು ಮೀರಿ ನಡೆದದ್ದರಿಂದ ನಷ್ಟರಾದರು. ನಿನ್ನೊಡನೆ ಈಗ ಯುದ್ಧ ಮಾಡಬೇಕೆಂದು ನಾವು ಬಂದಿರುವೆವು. ನಮ್ಮನ್ನು ಬ್ರಾಹ್ಮಣರೆಂದು ತಿಳಿಯಬೇಡ. ನಾವು ಕ್ಷತ್ರಿಯರು. ನಾನು ವಸುದೇವನ ಮಗ, ಕೃಷ್ಣ. ಇವರಿಬ್ಬರೂ ಭೀಮಾರ್ಜುನರು. ಈಗಲಾದರೂ ಸರಿಯೆ, ಸೆರೆಹಿಡಿದ ಅರಸರನ್ನು ಬಿಡು; ಇಲ್ಲವೇ ಯುದ್ಧಕ್ಕೆ ನಿಲ್ಲು." ಎಂದನು.

"ಎಲೈ ಕೃಷ್ಣನೇ, ನನಗೆ ಸೋತವರೇ ನನ್ನಲ್ಲಿ ಸೆರೆಬಿದ್ದಿರುವರು. ನನ್ನಲ್ಲಿ ನನಗೆ ಸೋಲದವರು ಯಾರು ಇರುತ್ತಾರೆ? ಸೋತವರ ವಿಷಯದಲ್ಲಿ ತನ್ನಿಚ್ಛೆ ಬಂದಂತೆ ನಡೆಯುವದು ಕ್ಷತ್ರಿಯನಿಗೆ ಧರ್ಮ. ಧರ್ಮಪಾಲನೆಗೆ ಯಾರ ಅಭ್ಯಂತರ ವೇನಿದೆ? ನಾನೇನು ನಿಮ್ಮಂತೆ ಚೋರಮಾರ್ಗದಿಂದ ಇತರರ ಗೃಹವನ್ನು ಪ್ರವೇಶಿಸಲಿಲ್ಲ. ನಾನು ಪ್ರಚ್ಛನ್ನವೇಷದಲ್ಲಿಲ್ಲ. ನಾನು ವ್ರತಾಚಾರಿಯೆಂದು ಅನ

ತವಾಡಲಿಲ್ಲ. ಧರ್ಮನಿರತರಲ್ಲಿಯೂ ದೋಷವನ್ನೆಣಿಸಿ ಅವರು ಶಿಕ್ಷಣೀಯ ರೆಂದು ದುರುಕ್ತಿಯನ್ನಾಡಲಿಲ್ಲ. ಸಮಾನಸ್ಕಂಧರನ್ನು ಧಿಕ್ಕರಿಸಿಲ್ಲ. ಇಂಥಾ ದುಷ್ಕೃತ್ಯವನ್ನು ಮಾಡಿದ ನೀವೇ ಪಾಪಿಗಳು. ನೀವೇ ಶಿಕ್ಷಾರ್ಹರು. ನಿಮ್ಮ ನ್ನು ಸಮಾನಸ್ಕಂಧರೆಂದು ಭಾವಿಸಿ, ನಿಮ್ಮೊಡನೆ ಯುದ್ಧಕ್ಕೆ ನಿಲ್ಲುವದೇ ನನ ಗೊಂದು ಅವಮಾನ. ನಿಮ್ಮನ್ನು ಶಿಕ್ಷಿಸುವದಕ್ಕಾಗಿಯೇ ನಿಮ್ಮೊಡನೆ ಯುದ್ಧ ಮಾಡುವೆನಲ್ಲದೆ ಬೇರೆ ಇಲ್ಲ. ನೀವು ಒಬ್ಬೊಬ್ಬರೇ ಬಂದರೂ ಸರಿಯೆ, ಇಲ್ಲ ವೇ ಮೂವರೂ ಕಲೆತು ಬಂದರೂ ಸರಿಯೆ, ಯುದ್ಧ ಮಾಡುವದಕ್ಕೆ ಸಿದ್ಧ ನಾಗಿರುವೆನು" ಎಂದು ಹೇಳಿ, ತನ್ನ ಮಗನಾದ ಸಹದೇವನನ್ನು ಕರೆಯಿಸಿ, ರಾ ಜ್ಯಾಭಿಷೇಕಕ್ಕೆ ಅಪ್ಪಣೆ ಕೊಟ್ಟು, ತಾನು ಯುದ್ಧ ಸನ್ನದ್ಧನಾಗಿ ನಿಂತನು.

ಆಗ ಶ್ರೀಕೃಷ್ಣನು ಅವನನ್ನು ಕೊಲ್ಲುವದಕ್ಕೆ ತಾನೇ ಸಮರ್ಥನಾದರೂ ಯಾದವರಿಂದ ಅಜೇಯನೆಂಬದಾಗಿ ಜರಾಸಂಧನಿಗೆ ಪ್ರಾಪ್ತವಾದ ವರವನ್ನು ಪಾ ಲಿಸಬೇಕೆಂದೆಣಿಸಿ, "ಎಲೈ, ರಾಜನೇ, ನಮ್ಮ ಮೂವರಲ್ಲಿ ಯಾರೊಡನೆ ಕಾಳ ಗವನ್ನು ಮಾಡಲಪೇಕ್ಷಿಸುತ್ತೀಯೆ, ಹೇಳು. ಅವನು ಸಿದ್ಧನಾಗಿ ನಿಲ್ಲುವನು." ಎಂದನು. ಜರಾಸಂಧನು "ನಾನು ಭೀಮಸೇನನೊಡನೆ ಯುದ್ಧಮಾಡುವ ದಕ್ಕೆ ಅಪೇಕ್ಷಿಸುತ್ತೇನೆ." ಎಂದು ಹೇಳಿ, ತನ್ನ ಪುರೋಹಿತನು ತಂದು ಕೊಟ್ಟ ಮಾಲ್ಯಾಂಗರಾಗಗಳನ್ನು ಧರಿಸಿ, ಕಾಳೆಗಕ್ಕೆ ಮುಂಕೊಂಡು, ರಂಗದಲ್ಲಿ ನಿಂತು, "ಎಲೋ ಭೀಮಸೇನ, ನಿನ್ನೊಡನೆ ಕಾಳೆಗವಮಾಡುವೆನು" ಎಂದು ಕೂಗಿದ ನು. ಕೂಡಲೆ, ಭೀಮಸೇನನು ಶ್ರೀಕೃಷ್ಣನ ಆಶೀರ್ವಾದವನ್ನು ಪಡೆದು, ಯುದ್ಧ ರಂಗಕ್ಕೆ ಬಂದು ನಿಂತನು.

ಒಡನೆಯೇ ಅವರಿಬ್ಬರೂ ಬಾಹುಯುದ್ಧವನ್ನು ಮಾಡ ತೊಡಗಿ, ತೋ ಳುಗಳನ್ನು ತಟ್ಟಿಕೊಂಡು, ಕೈಗಳಿಗೆ ಕೈಗಳನ್ನೂ, ಭುಜಗಳಿಗೆ ಭುಜಗಳನ್ನೂ ಸೇರಿಸಿ ತಳ್ಳಿ, ಬಾಹುಗಳಿಂದ ಕತ್ತನ್ನು ಹಿಡಿದೆಳೆದು ಒಳಹೊಕ್ಕು ಎತ್ತಿಹಾಕಿ ಸಿಕ್ಕಿದರೆ ಕುಕ್ಕಿ ಕರಲಾಘವವನ್ನು ತೋರಿಸುತ್ತಾ, ಪಟ್ಟಿಗೆ ಪಟ್ಟನ್ನು ಹಾ ಕುತ್ತಾ, ಲಾಗಹಾಕಿ ಆ ಪಟ್ಟನ್ನು ತಪ್ಪಿಸಿಕೊಂಡು ಚಂಡಿನಂತೆ ಪುಟಹಾರಿ ದೂರಕ್ಕೆ ಹೋಗಿ ನಿಂತು, ಜಯಾಭಿಲಾಷೆಯಿಂದ ಅಟ್ಟಹಾಸಮಾಡುತ್ತಾ,

ಮರಳಿ ಸಮೀಪಕ್ಕೆ ಬಂದು ಸೇರಿ ಎಡಗೈಯಿಂದ ಕೊರಳನ್ನು ಒತ್ತಿ ಹಿಡಿದು ಮಂಡಿಗೆ ಮಂಡಿಯನ್ನು ತಾಡಿಸಿ ತಲೆ ಕೆಳಗಾಗುವಂತೆ ತಳ್ಳಿ, ಚಕ್ರದಂತೆ ಗರಗರನೆ ತಿರುಗಿಸಿ ಬಿಟ್ಟು, ಬಾರಿಬಾರಿಗೂ ಉಲ್ಲಾಸದಿಂದ ಕೈಗಳನ್ನು ಅಪ್ಪಳಿಸುತ್ತಾ, ಮುಷ್ಟಿಪ್ರಹಾರದಿಂದ ಎದೆಗಳನ್ನು ನೋಯಿಸುತ್ತಾ, ಕೈಗಳಿಂದ ಕೈಗಳನ್ನು ಹಿಡಿದು ಎಳೆದೆಳೆದು ಬಿಡುತ್ತಾ, ಸಿಂಹಗಳ ಹಾಗೆ ನೋಡುತ್ತಾ, ಬಾಹುಗಳಿಂದ ನಡುವನ್ನು ಹಿಡಿದು ಗರಗರನೆ ತಿರುಗಿಸಿ ಕೆಳಕ್ಕೆ ತಳ್ಳಿ ಕಲ್ಲಿನಂತೆ ದೃಢವಾಗಿರುವ ಮುಷ್ಟಿಗಳಿಂದ ಎದೆಯ ಮೇಲೆ ಹೊಡೆಯುತ್ತಾ, ಹದಿಮೂರು ದಿವಸಗಳು ಅನ್ನಾಹಾರಗಳನ್ನು ಬಿಟ್ಟು ದಿವಾರಾತ್ರಿಯೂ ವಿಶ್ರಾಂತಿಯಿಲ್ಲದೆ ಮಲ್ಲಯುದ್ಧವನ್ನು ಮಾಡಿದರು.

ಚತುರ್ದಶೀದಿನದ ಸಮರಾತ್ರಿಯಲ್ಲಿ ಜರಾಸಂಧನು ಬಳಲಿ, ಯುದ್ಧದಿಂದ ಹಿಂಜರಿಯಲು; ಶ್ರೀಕೃಷ್ಣನು ಭೀಮಸೇನನನ್ನು ತ್ವರೆಪಡಿಸುವದಕ್ಕೋಸ್ಕರ “ ಎಲೈ ಭೀಮಸೇನನೆ, ಶ್ರಮಾರ್ತನಾದ ಶತ್ರುವನ್ನು ಹಿಂಸಿಸಬಾರದು. ಬಲಾತ್ಕಾರದಿಂದ ಹಿಂಸಿಸಿದರೆ, ಒಂದು ವೇಳೆ ಪ್ರಾಣಬಿಟ್ಟಾನು. ಆದ್ದರಿಂದ ಅಧಿಕವಾಗಿ ಶತ್ರುವನ್ನು ಶ್ರಮಪಡಿಸದೆ ಸಮನಾಗಿ ಯುದ್ಧಮಾಡು.” ಎಂದನು.

ಭೀಮನು ಆ ಸಂಜ್ಞೆಯನ್ನು ತಿಳಿದು, “ ಎಲೈ ಕೃಷ್ಣನೇ, ಈ ಜರಾಸಂಧನನ್ನು ನೋಯಿಸಲು ನಾನು ಸಮರ್ಥನಲ್ಲ. ಈತನು ಸ್ವಭಾವವಾಗಿ ಬಲಿಷ್ಠನು.” ಎಂದನು. ಶ್ರೀಕೃಷ್ಣನು ಕೇಳಿ ಆ ಕಾಲದಲ್ಲಿಯೇ ಕೊಲ್ಲಿಸಬೇಕೆಂದು, “ ಎಲೈ ವಾಯುಪುತ್ರನೆ, ಜಗತ್ಪ್ರಾಣನಾದ ಸಮೀರಣನ ಬಲವು ನಿನ್ನಲ್ಲಿರುವದನ್ನು ಮರೆತೆಯಾ? ಅದನ್ನು ಜರಾಸಂಧನಲ್ಲಿ ತೋರಿಸು. ” ಎಂದು ಹೇಳಿ, ಅಲ್ಲಿದ್ದ ಒಂದು ಹೊಡಕೆಯನ್ನು ತೆಗೆದು ಎರಡಾಗಿ ಸೀಳಿ ಕೆಳಗೆ ಹಾಕಿದನು.

ಅದನ್ನು ನೋಡಿ, ಭೀಮನು ತನ್ನ ತಂದೆಯ ಬಲದಿಂದಲೂ ಶ್ರೀಕೃಷ್ಣನ ತೇಜಸ್ಸಿನಿಂದಲೂ ಬಹಳ ವೇಗವಾಗಿ ಜರಾಸಂಧನನ್ನು ನೂರು ಸಲ ಗರಗರನೆ ತಿರುಗಿಸಿ, ಎತ್ತಿ ನೆಲಕ್ಕೆ ಅಪ್ಪಳಿಸಿ, ತನ್ನ ಕಾಲಿನಿಂದ ಅವನ ಒಂದು ಕಾಲನ್ನು ಮೆಟ್ಟಿ, ಮತ್ತೊಂದು ಕಾಲನ್ನು ತನ್ನ ಕೈಯಿಂದ ಹಿಡಿದುಕೊಂಡು, ಸಿಗಿದೆಸೆದನು.

ಆ ಶರೀರದ ತುಂಡುಗಳೆರಡೂ ಆ ಕ್ಷಣವೇ ಸೇರಲು; ಜರಾಸಂಧನು ಥಟ್ಟನೆ ಎದ್ದು, ರೋಷಾವೇಶದಿಂದ ಪುನಃ ಭೀಮಸೇನನೊಡನೆ ಯುದ್ಧಮಾಡಲು; ಆತನ ವೇಗವನ್ನು ಸಹಿಸಲಾರದೆ ಬಳಲಿ ಹಿಂಜರಿಯುವ ಭೀಮನನ್ನು ಶ್ರೀಕೃಷ್ಣನು ನೋಡಿ, ತನ್ನ ತೇಜಸ್ಸನ್ನು ಇಮ್ಮಡಿಯಾಗಿ ಅವನಲ್ಲಿ ಸೇರಿಸಿ, ಬಳಿಕ ಮತ್ತೊಂದು ಹುಲ್ಲನ್ನು ತೆಗೆದು, ಸಿಗಿದು, ಒಂದು ಸೀಳನ್ನು ಸರಿಯಾಗಿಯೂ ಮತ್ತೊಂದನ್ನು ತಲೆಕೆಳಗಾಗಿಯೂ ಹಾಕಿದನು. ಭೀಮಸೇನನು ಅದರ ಅಭಿಪ್ರಾಯವನ್ನು ತಿಳಿದು, ಜರಾಸಂಧನ ಶರೀರವನ್ನು ಹಾಗೆಯೇ ಸಿಗಿದು ಆಯೆರಡುಸೀಳುಗಳನ್ನೂ ವ್ಯತ್ಯಸ್ತವಾಗಿ ಎಸೆದನು. ಅವುಗಳು ತಿರುಗಿ ಸೇರದೆ ಇರುವದನ್ನು ಕಂಡು, ಭೀಮಸೇನನು ಸಿಂಹನಾದವನ್ನು ಮಾಡಿದನು.

ಆ ಬಳಿಕ ಅವರು ಜರಾಸಂಧನು ನಿದ್ರೆಮಾಡುವನೆಂಬ ಭ್ರಾಂತಿಯನ್ನುಂಟುಮಾಡುವಹಾಗೆ ಶವವನ್ನು ಅರಮನೆಯ ಬಾಗಲಲ್ಲಿ ಮಲಗಿಸಿ ಜರಾಸಂಧನ ರಥವನ್ನೇರಿ ಊರಿನ ಹೊರಗೆ ಬಂದು, ಸೆರೆಯಲ್ಲಿ ನರಳುತ್ತಿದ್ದ ರಾಜಪುತ್ರರನ್ನು ಬಿಡಿಸಿದರು.

ಮಗಧರಾಜಧಾನಿಯ ಜನಗಳೆಲ್ಲರಿಂದ ಸರ್ವೋಪಕರಣಗಳನ್ನು ತೆಗಿಸಿಕೊಂಡು ಬಂದು ಸೆರೆಯಿಂದ ಬಿಟ್ಟ ರಾಜಪುತ್ರರು ಶ್ರೀಕೃಷ್ಣನಿಗೆ ನಮಸ್ಕರಿಸಿ ವಿಜ್ಞಾಪಿಸಿದರು. "ಎಲೈ ಸ್ವಾಮಿಯೆ, ಆಶ್ರಿತರಾದ ನಮ್ಮಲ್ಲಿ ಹೀಗೆ ಅನುಗ್ರಹವನ್ನು ತೋರಿಸಿದ್ದು ಆಶ್ಚರ್ಯವಲ್ಲ. ಭೀಮಾರ್ಜುನರೊಡಗೂಡಿ ಆಶ್ರಿತ ಪರಿಪಾಲನೆಯನ್ನು ಮಾಡುವದಕ್ಕಾಗಿಯೇ ನಿನ್ನ ಅವತಾರವು ಆಗಿರುವದು. ಜರಾಸಂಧನೆಂಬ ಮಹಾಸಮುದ್ರದಲ್ಲಿ ಇದುವರೆಗೆ ಮುಳುಗಿದ್ದ ನಾವುಗಳು ನಿನ್ನ ಅನುಗ್ರಹದಿಂದ ಉತ್ತೀರ್ಣರಾದೆವು. ಮುಂದೆ ನಾವು ಯಾವರೀತಿಯಲ್ಲಿ ನಡೆದುಕೊಳ್ಳಬೇಕೋ ಅಪ್ಪಣೆಯಾಗಬೇಕು." ಎಂದರು.

"ಎಲೈ ರಾಜರುಗಳಿರಾ, ಧರ್ಮಾತ್ಮನಾದ ಯುಧಿಷ್ಠಿರನು ಈಗ ಪ್ರಯತ್ನಿಸಿರುವ ಯಜ್ಞಕ್ಕೆ ನೀವೆಲ್ಲರೂ ಸಹಾಯ ಮಾಡುವದೇ ಮುಖ್ಯಕಾರ್ಯವು." ಎಂದನು. ಅರಸರು ಹೃಷ್ಟರಾಗಿ, ಶ್ರೀಕೃಷ್ಣನ ಆಜ್ಞೆಯನ್ನು ತಲೆಯಲ್ಲಿ ಧರಿಸಿ, ತಂತಮ್ಮ ಪಟ್ಟಣಗಳಿಗೆ ತೆರಳಿದರು.

ಅನಂತರ ಶ್ರೀಕೃಷ್ಣನು ಜರಾಸಂಧನ ಮಂತ್ರಿಯೇ ಮುಂತಾದವರನ್ನು ಕರೆಯಿಸಿ, ಮುಖ್ಯಪುರೋಹಿತರನ್ನು ಮುಂದಿಟ್ಟುಕೊಂಡು, ಸಹದೇವನಿಗೆ ಪಟ್ಟಾಭಿಷೇಕವನ್ನು ಮಾಡಿ, ಅಭಯವನ್ನಿತ್ತು, ಅವನು ಕೊಟ್ಟ ಕಾಣಿಕೆಗಳನ್ನು ಅಂಗೀಕರಿಸಿ, ಧರ್ಮರಾಜನ ಯಜ್ಞಕ್ಕೆ ಬರುವಂತೆ ಹೇಳಿ ಭೀಮಾರ್ಜುನರೊಡನೆ ಜರಾಸಂಧನ ರಥದಲ್ಲಿ ಹೊರಟು, ಇಂದ್ರಪ್ರಸ್ಥವನ್ನು ಸೇರಿದನು.

ಕೂಡಲೆ ಧರ್ಮರಾಜನು ಜರಾಸಂಧನ ಮರಣಸಮಾಚಾರವನ್ನು ಕೇಳಿ ಸಂತೋಷವನ್ನು ಹೊಂದಿ, ಶ್ರೀಕೃಷ್ಣನಿಗೆ ಅತ್ಯಧಿಕವಾದ ಸನ್ಮಾನವನ್ನು ಮಾಡಿ, ಭೀಮಾರ್ಜುನರನ್ನಾಲಿಂಗಿಸಿ, ಜರಾಸಂಧನು ಮಡಿದ ವೃತ್ತಾಂತವನ್ನು ವಿಸ್ತಾರವಾಗಿ ಕೇಳಿ, ಸಂತೋಷಪಡುತ್ತಿದ್ದನು.

ಶ್ರೀಕೃಷ್ಣನು ಮೂರು ದಿನ ಅಲ್ಲೇ ಇದ್ದು, ರಾಜನ ಅಪ್ಪಣೆಯನ್ನು ಪಡೆದು, ಕುಂತಿ, ಸುಭದ್ರೆ, ದ್ರೌಪದಿ, ಭೀಮಸೇನ, ಅರ್ಜುನ ಇವರ ಅನುಮತಿಯನ್ನು ಹೊಂದಿ ಜರಾಸಂಧನ ರಥದಲ್ಲಿಯೇ ತನ್ನ ರಾಜಧಾನಿಗೆ ಪ್ರಯಾಣವನ್ನು ಬಳೆಯಿಸಿದನು. ಜರಾಸಂಧನ ಮರಣ ವೃತ್ತಾಂತವನ್ನು ಕೇಳಿ ದ್ವಾರಕಾನಿವಾಸಿಗಳೆಲ್ಲರೂ ಆನಂದಪಟ್ಟರು. ಅದು ಮೊದಲು ಪಾಂಡವರ ಕೀರ್ತಿಯು ಭೂಮಿಯಲ್ಲಿ ನೆಲೆಗೊಂಡಿತು.

## ೫. ಪಾಂಡವರ ದಿಗ್ವಿಜಯ.

ಹೀಗಿರಲು, ಒಂದಾನೊಂದು ದಿನ ಧನಂಜಯನು ರಾಜನ ಪದಕಮಲವನ್ನು ಸೇರಿ, "ಎಲೈ ಪ್ರಭುವೇ, ಮಾಡಬೇಕಾದ ಕೆಲಸವನ್ನೆಲ್ಲಾ ಮಾಡಿಯಾಯಿತು. ದಿವ್ಯವಾದ ರಥವೂ, ಗಾಂಡೀವ ಧನಸ್ಸೂ, ಅಕ್ಷಯತೂಣೀರಗಳೂ, ಉತ್ತಮವಾದ ಗದೆಯೂ ಒದಗಿದವು. ಅನೇಕರಾಜರು ನಮಗೆ ಸ್ನೇಹಿತರಾದರು. ಯಜ್ಞೋಪಯುಕ್ತವಾದ ಧನಾರ್ಜನೆಯೊಂದೇ ಉಳಿದಿರುವದು. ಅದಕ್ಕಾಗಿ ನಾಲ್ಕುದೆಸೆಯ ನೃಪತಿಗಳನ್ನು ಗೆದ್ದು ಅವರಿಂದ ಕಪ್ಪಕಾಣಿಕೆಗಳನ್ನು ತರಬೇಕು. ಇದಕ್ಕೆ ತಮ್ಮ ಅಪ್ಪಣೆಯನ್ನು ನಿರೀಕ್ಷಿಸುತ್ತಿರುವೆವು." ಎಂದು ವಿಜ್ಞಾಪಿಸಿದನು. ಯುಧಿಷ್ಠಿರನು, ಬ್ರಾಹ್ಮಣರ ಆಶೀರ್ವಾದಬಲದಿಂದ ನಿಮ್ಮ ಕೋರಿಕೆಯು ನೆರವೇರುವದೆಂದು ಹರಸಿ, ಅರ್ಜುನನ್ನು ಬಡಗಣ ದಿಕ್ಕಿಗೂ,

ಭೀಮಸೇನನನ್ನು ಮೂಡಣ ದೆಸೆಗೂ, ನಕುಲನನ್ನು ಪಡುವಣ ಕಡೆಗೂ, ಸಹದೇವನನ್ನು ತೆಂಕಣ ಭಾಗಕ್ಕೂ, ಜೈತ್ರಯಾತ್ರೆಗಾಗಿ ಸೇನೆಯೊಡನೆ ಕಳುಹಿದನು.

ಉತ್ತರದಿಕ್ಕಿಗೆ ಹೊರಟ ಅರ್ಜುನನು ಮೊದಲು ಕುಳಿಂದದೇಶಾಧಿಪನನ್ನು ಜಯಿಸಿ, ಆನರ್ತ ಕಾಲಕೂಟ ಶಾಕಲ ದೇಶಗಳ ಅರಸರಾದ ಸುಮಂಡಲ ಪ್ರತಿವಿಂಧ್ಯರನ್ನು ಸೋಲಿಸಿ, ಪ್ರಾಗ್ಜ್ಯೋತಿಷನಗರಕ್ಕೆ ಬಂದು, ಕಿರಾತ ಚೀನರೇ ಮೊದಲಾದವರ ಸಹಾಯದಿಂದ ಯುದ್ಧಕ್ಕೆ ಬಂದ ಭಗದತ್ತನನ್ನು ಸೋಲಿಸಿ, ಕಪ್ಪ ಕಾಣಿಕೆಗಳನ್ನು ತೆಗೆದುಕೊಂಡು, ರಾಜನ ಯಾಗಕ್ಕೆ ಬರುವಂತೆ ಹೇಳಿ, ಮುಂದೆ ಹೊರಟು, ಅಲ್ಲಲ್ಲಿನ ಪರ್ವತರಾಜರುಗಳನ್ನು ಸಮರದಲ್ಲಿ ಗೆದ್ದು, ಅವರನ್ನು ಜೊತೆಯಲ್ಲಿ ಕರೆದುಕೊಂಡು ಉಲೂಕದೇಶಾಭಿಮುಖವಾಗಿ ಬರುತ್ತಿದ್ದನು. ಆಗ ಸೇನಾಭರದಿಂದೆದ್ದ ದೂಳಿಯು ಗಗನಾಗ್ರಭಾಗವನ್ನು ಚುಂಬಿಸುತ್ತಿರಲು, "ಇದೇನು, ಅಕಾಲ ಮೇಘಸಮುದಾಯವೋ ಧೂಮಕೇತುವೋ!" ಎಂದು ಬೆರಗಾಗುತ್ತ, ವಿಸ್ಮಯದಿಂದ ನೋಡುತ್ತಿದ್ದ ಉಲೂಕಪತಿಯ ಕಿವಿಗಳಿಗೆ ಭೇರಿಗಳ ಭಂಭಾರವವೂ, ಗಜಗಳ ಬೃಂಹಿತವೂ, ವಾಜಿಗಳ ಹೇಷಾರವವೂ, ಚಕ್ರಗಳ ಚೀತ್ಕಾರವೂ, ಭಟರ ಸಿಂಹನಾದವೂ ಕ್ರಮಕ್ರಮವಾಗಿ ಕೇಳಿಸಲು; ಮೇಘಧ್ವನಿಯನ್ನು ಕೇಳಿದ ಸಿಂಹಕಿಶೋರದಂತೆದ್ದು, ಯುದ್ಧಕ್ಕೆ ಹೊರಟು, ಶತ್ರು ಸೇನೆಯನ್ನು ತಡೆದು ಬಹಳಕಾಲ ಯುದ್ಧಮಾಡಿ, ಕಿರೀಟಿಯು ತನಗೆ ಅಜೇಯನೆಂದರಿತು, ಅಭಯವನ್ನು ಬೇಡಿಕೊಂಡನು. ಅರ್ಜುನನು ಅಭಯವನ್ನಿತ್ತು ಅವನನ್ನು ಸಂಗಡ ಕರೆದುಕೊಂಡು, ಉತ್ತರಕುರುದೇಶಗಳನ್ನಾಳುತ್ತಿದ್ದ ಸುಸಂಕಲಪ್ರಭೃತಿಗಳನ್ನೂ, ಪೌರವಶ್ರೇಷ್ಠನಾದ ವಿಷ್ವಗಶ್ವನನ್ನೂ ಉತ್ಸವಸಂಕಟರೆಂಬ ಏಳುಬಗೆಯ ಕಾಡುಜನರನ್ನೂ ಕದನದಲ್ಲಿ ಜಯಿಸಿ, ಇತರರಿಗೆ ಅವರಿಂದ ಉಂಟಾದ ಬಾಧೆಯನ್ನು ತಪ್ಪಿಸಿ, ಕಾಶ್ಮೀರ ಲೋಹಿತ ತ್ರಿಗರ್ತ ದಾರವಕೋಕನದ ದೇಶಗಳ ಅರಸರ ಹೆಮ್ಮೆಯನ್ನಡಗಿಸಿ, ಆ ದೇಶಗಳ ಸಂಪತ್ತನ್ನೆಲ್ಲಾ ಸಂಗ್ರಹಿಸಿ, ಅವಿಸಾರಿಯೆಂಬದೊಂದು ಮನೋಹರವಾದ ಪಟ್ಟಣವನ್ನು ನಾಶಮಾಡಿ, ಸುರಕ್ಷಿತವಾದ ಸಿಂಹಪುರಕ್ಕೆ ಮುತ್ತಿಗೆ ಹಾಕಿ, ಸುರಸುಮಾಲಗಳೆಂಬ ದೇಶಗಳ ಮಾರ್ಗವಾಗಿ ಹೊರಟು, ಕಾಂಭೋಜ ಬಾಹ್ಲೀಕದರದ ದೇಶ

ಗಳನ್ನು ವಶಮಾಡಿಕೊಂಡು, ಈಶಾನ್ಯದಿಕ್ಕಿನ ಕಾಡುಗಳಲ್ಲಿ ವಾಸಮಾಡುತ್ತಾ, ಹಾವಳಿಮಾಡುತ್ತಿದ್ದ ಕಳ್ಳರ ದೊರೆಗಳನ್ನು ನಿರ್ಮೂಲಿಸಿ, ಬೃಹಸ್ಪತಿಪತ್ನಿಯಾದ ತಾರಕೆಯ ನಿಮಿತ್ತವಾಗಿ ಹಿಂದೆ ನಡೆದ ದೇವಾಸುರಯುದ್ಧದಂತೆ ಅತಿಭಯಂಕರವಾದ ಯುದ್ಧದಲ್ಲಿ ಋಷೀಕಲೋಹಕಾಂಭೋಜರನ್ನು ಸೋಲಿಸಿ, ಶುಕೋದರಸಮಾನವಾದ ಕಾಂತಿಯುಳ್ಳ ಎಂಟು ಉತ್ತಮಾಶ್ವಗಳನ್ನೂ, ನವಿಲಿನ ಬಣ್ಣದಂತೆ ಬಣ್ಣವುಳ್ಳ ವಾಯುವೇಗದ ನೂರಾರುಕುದುರೆಗಳನ್ನೂ ಅವರಿಂದ ಕಪ್ಪವಾಗಿ ಸ್ವೀಕರಿಸಿ, ಹಿಮವಂತ ನಿಷ್ಕುಟ ಪ್ರಾಂತಗಳಲ್ಲಿನ ಅರಸರನ್ನು ಜಯಿಸಿ, ಶ್ವೇತಪರ್ವತವನ್ನು ದಾಟಿ, ಕಿಂಪುರುಷದೇಶದ ರಾಜನಿಂದ ಕಪ್ಪಕಾಣಿಕೆಗಳನ್ನಂಗೀಕರಿಸಿ, ಮಾನಸಸರವನ್ನು ಸೇರಿ, ಅದರ ಬಳಿಯಲ್ಲಿ ಯಕ್ಷಪಾಲಿತವಾದ ಹಾಟಕದೇಶಕ್ಕೆ ನುಗ್ಗಿ, ತಿತ್ತಿರಿ ಕಲ್ಮಾಷ ಮಂಡೂಕಗಳೆಂದು ಪ್ರಸಿದ್ಧವಾದ ಕುದುರೆಗಳನ್ನು ಬಲ್ಮೆಯಿಂದ ತೆಗೆದುಕೊಂಡು, ಉತ್ತರ ಹರಿವರ್ಷವನ್ನು ಜಯಿಸುವ ಯತ್ನದಲ್ಲಿರುವ ಸಮಯದಲ್ಲಿ, ಮಹಾಬಲಿಷ್ಠರಾಗಿಯೂ ಅತಿದೀರ್ಘಕಾಯರಾಗಿಯೂ ಇರುವ ದ್ವಾರಪಾಲರಿಬ್ಬರು ಕಾಣಿಸಿಕೊಂಡು, "ಎಲೈ ಪಾರ್ಥನೇ, ಈ ಪುರವನ್ನು ಏನೇನು ಮಾಡಿದರೂ ನಿನ್ನಿಂದ ಜಯಿಸಲಾಗುವದಿಲ್ಲ. ನಿನ್ನ ಕ್ಷೇಮವನ್ನು ನೋಡಿಕೊಂಡು ಹಿಂದಿರುಗು. ನೀನು ಜಯಿಸಿದ್ದು ಇಲ್ಲಿಗೆ ಸಾಕು. ನಿನ್ನನ್ನು ನೋಡಿ ನಮಗೆ ಬಹಳ ಸಂತೋಷವುಂಟಾಯಿತು. ಈ ದೇಶವನ್ನು ಹೊಗುವ ಮನುಷ್ಯರು ಮರಣವನ್ನು ಹೊಂದುವದು ನಿಜ. ಇಲ್ಲಿ ಉತ್ತರಕುರುಗಳು ವಾಸಮಾಡುವರು. ಇಲ್ಲಿ ಯಾವಾಗಲೂ ಯುದ್ಧ ನಡೆದಿಲ್ಲ. ಇಲ್ಲಿ ಜಯಿಸಲಿಕ್ಕೆ ನಿನಗೆಯಾವದೂ ಇಲ್ಲ. ಇದನ್ನು ಒಂದುವೇಳೆ ಪ್ರವೇಶಿಸಿದರೂ ನಿನ್ನ ಕಣ್ಣಿಗೆ ಏನೂ ಕಾಣಬರುವದಿಲ್ಲ. ಇದು ಚರ್ಮಚಕ್ಷುಸ್ಸಿಗೆ ಅಗೋಚರವಾದ ಪ್ರದೇಶ. ನಿನ್ನ ಇಷ್ಟವನ್ನು ಹೇಳು, ಮಾಡಿಕೊಡುವೆವು." ಎಂದು ಹೇಳಲು ; "ಎಲೈ ದ್ವಾರಪಾಲಕರೆ, ಧರ್ಮರಾಜನೆಂಬ ಕ್ಷತ್ರಿಯವರೇಣ್ಯನು ಚಕ್ರವರ್ತಿಪದವಿಯನ್ನು ಬಯಸಿ, ರಾಜಸೂಯಯಾಗದಲ್ಲಿ ಯತ್ನಿಸಿರುವನು. ಆದ್ದರಿಂದ ಅಲ್ಲಲ್ಲಿನ ರಾಜರುಗಳನ್ನು ಜಯಿಸಿ ಅವರಿಂದ ಕಪ್ಪಗಳನ್ನು ಸ್ವೀಕರಿಸುತ್ತಾ ಇಲ್ಲಿಗೆ ಬಂದೆವು. ಇದು

ಮನುಷ್ಯರ ಪ್ರವೇಶಕ್ಕೆ ತಕ್ಕದ್ದಲ್ಲವಾಗಿದ್ದರೆ, ನಾನು ಪ್ರವೇಶಿಸುವದಿಲ್ಲ." ಎನ್ನಲು; ಅವರು ದಿವ್ಯವಾದ ಉಡುಪುಗಳನ್ನೂ, ದುಕೂಲಗಳನ್ನೂ ತಂದು ಕೊಟ್ಟರು. ಅವೆಲ್ಲವನ್ನೂ ಸ್ವೀಕರಿಸಿ, ಪರಾಜಿತರಾದ ರಾಜರೊಡನೆಯೂ, ಬಂಡಿಬಂಡಿಗಳಲ್ಲಿ ತಂದ ಕಪ್ಪಗಳೊಡನೆಯೂ ಇಂದ್ರಪ್ರಸ್ಥವನ್ನು ಪ್ರವೇಶಿಸಿ, ಅವೆಲ್ಲವನ್ನು ಧರ್ಮಜನಿಗೆ ಒಪ್ಪಿಸಿ, ಆತನ ಅಪ್ಪಣೆಯಿಂದ ವಿಶ್ರಾಂತಿಗಾಗಿ ಅಂತಃಪುರಕ್ಕೆ ತೆರಳಿದನು.

ಇತ್ತ ಬಲದರ್ಪಿತನಾದ ಭೀಮಸೇನನು ಯುಧಿಷ್ಠಿರನ ಅಪ್ಪಣೆಯಿಂದ ಪೂರ್ವಾಭಿಮುಖವಾಗಿ ಹೊರಟು, ಮೊದಲು ಪಾಂಚಾಲದೇಶವನ್ನು ವಿವಿಧೋಪಾಯದಿಂದ ಜಯಿಸಿ, ಗಂಡಕ ವಿದೇಹ ದೇಶಗಳನ್ನು ವಶಮಾಡಿಕೊಂಡು, ದ್ವಂದ್ವಯುದ್ಧದಲ್ಲಿ ಕುಂದಿದ ಸುಧರ್ಮನಿಗೆ ಸೇನಾಧಿಪತ್ಯವನ್ನು ಕೊಟ್ಟು, ಬಗೆಬಗೆಯ ತಂತ್ರಗಳಿಂದ ಅಶ್ವಮೇಧರಾಷ್ಟ್ರಾಧೀಶನನ್ನು ತಗ್ಗಿಸಿ, ಆತನ ದೇಶಕೋಶಗಳನ್ನು ಸೂರೆಗೈದು, ಪುಳಿಂದ ದೇಶದ ಭೂಮಿಪರಲ್ಲಿ ತನ್ನ ಆಜ್ಞೆಯನ್ನು ಪ್ರಚಾರಗೊಳಿಸಿ, ಚೇದಿದೇಶಕ್ಕೆ ಹೊರಟು, ಶಿಶುಪಾಲನ ಕ್ಷೇಮ ಲಾಭವನ್ನು ವಿಚಾರಿಸಿ, ಮಹಾರಾಜನ ಉದ್ದೇಶವನ್ನರುಹಿ, ಆತನ ಪಟ್ಟಣದಲ್ಲಿಯೇ ಆತನ ಪ್ರಾರ್ಥನೆಯಂತೆ ಮೂವತ್ತು ರಾತ್ರಿಗಳು ಕಳೆದು, ಆತನು ಕಳುಹಿಕೊಟ್ಟ ಸಾಮಗ್ರಿಗಳೊಡನೆಯೂ ಸೇನೆಯೊಡನೆಯೂ ಹೊರಟು ಕುಮಾರ ದೇಶಾಧಿಪತಿಯನ್ನು ಸೋಲಿಸಿ, ಕೋಸಲ ಅಯೋಧ್ಯೆ ಗೋಪಾಲಾಕ್ಷ ಉತ್ತರ ಕೋಸಲ ಇವೇ ಮೊದಲಾದ ಹಿಮವತ್ಪರ್ವತದ ತಪ್ಪಲಲ್ಲಿನ ದೇಶಗಳಲ್ಲೆಲ್ಲಾ ತನ್ನ ಶೌರ್ಯವನ್ನು ತೋರಿಸಿ, ಭಲ್ಲಾಟ ಕಾಶಿ ಸುಪಾರ್ಶ್ವ ಮತ್ಸ್ಯ ಪಶುಭೂಮಿ ಇವುಗಳಲ್ಲೆಲ್ಲಾ ಕೊಳ್ಳೆಹೊಡೆದು, ಮದಾಧರಮಹೀಧರದಲ್ಲಿ ಸೋಮಧೇಯರನ್ನು ಜಯಿಸಿ, ಸ್ವಲ್ಪ ಉತ್ತರಕ್ಕೆ ತಿರುಗಿ, ವತ್ಸ, ಭೂವಿಾಶ, ನೈಷಧ, ಭರ್ಗ, ಮಣಿಮಂತರೇ ಮೊದಲಾದವರನ್ನು ಗೆದ್ದು, ಶರ್ಮಕವರ್ಮಕರನ್ನು ನಯದಿಂದ ತಗ್ಗಿಸಿ, ಶಕರನ್ನು ಮೋಸದಿಂದ ಸೋಲಿಸಿ, ವಿದೇಹದಲ್ಲಿ ನಿಂತು ಇಂದ್ರಪರ್ವತದ ಪ್ರಾಂತಗಳಲ್ಲಿದ್ದ ಏಳು ಮಂದಿ ಕಿರಾತರಾಜರುಗಳನ್ನು ಸೇನೆ ಕಳುಹಿ ಹಿಡಿತರಿಸಿ, ಅಲ್ಲಿಂದ ಮಗಧ ದೇಶಕ್ಕೆ ಹೊರಟು, ಮಾರ್ಗದಲ್ಲಿ ಜಿತ

ರಾದ ದಂಡ ದಂಡಧಾರರೆಂಬ ಅರಸರೊಡಗೂಡಿ ಗಿರಿವ್ರಜವನ್ನು ಸೇರಿ, ಅಲ್ಲಿ ಜರಾಸಂಧನ ಮಗನು ತಂದುಕೊಟ್ಟ ಕಪ್ಪವನ್ನು ಸ್ವೀಕರಿಸಿ, ಮುಂದೆ ಹೊರಟು, ಕರ್ಣನ ಅಹಂಕಾರವನ್ನು ಕದನದಲ್ಲಿ ಮುರಿದು, ಪುಂಡ್ರಕ್ಕೆ ಅರಸಾದ ವಾಸುದೇವನನ್ನೂ ಕೌಶಿಕೀಕಚ್ಛದೇಶಪರಿವೃಢನನ್ನೂ ಭಯಂಕರವಾದ ರಣದಲ್ಲಿ ಸೋಲಿಸಿ, ವಂಗದೇಶಾಧಿಪನನ್ನು ಪೀಡಿಸಿ, ಸಮುದ್ರತೀರವಾಸಿಗಳಾದ ಅನೇಕ ಮ್ಲೇಚ್ಛರಾಜರನ್ನೂ, ಬಲಿಹೊಯ್ದು, ಅವರು ಗಳಿಸಿಟ್ಟಿದ್ದ ಧನವನ್ನು ತೆಗೆದುಕೊಂಡು, ಅನೂಪದೇಶಕ್ಕೆ ಬಂದು, ಅಲ್ಲಿನವರು ಬೆದರಿ ಬಂದು ತಂದು ಸುರಿದ ರತ್ನಧನಕನಕವಾಹನವಸ್ತ್ರಾದಿಗಳ ರಾಸಿಗಳನ್ನು ಸ್ವೀಕರಿಸಿ, ಇಂದ್ರಪ್ರಸ್ಥಕ್ಕೆ ಭೀಮಪರಾಕ್ರಮಶಾಲಿಯಾದ ಭೀಮಸೇನನು ಬಂದು, ಅವೆಲ್ಲವನ್ನು ಯುಧಿಷ್ಠಿರನಿಗೆ ಒಪ್ಪಿಸಿದನು.

ಧರ್ಮರಾಜನ ಅಪ್ಪಣೆಯನ್ನು ಪಡೆದು, ಪ್ರಬಲವಾದ ಸೈನ್ಯದೊಡನೆ ಸಹದೇವನು ದಕ್ಷಿಣದಿಗಭಿಮುಖನಾಗಿ ಹೊರಟನು. ಕೂಡಲೆ ಮತ್ಸ್ಯದೇಶಾಧಿಪನನ್ನೂ ಶೂರಸೇನನನ್ನೂ ಯುದ್ಧದಲ್ಲಿ ಜಯಿಸಿದನು. ಅನಂತರದಲ್ಲಿ ದಂತವಕ್ರನ ಸಿಂಹಾಸನವನ್ನು ಕಿತ್ತು, ಸುಮಿತ್ರನ ರಾಜ್ಯವನ್ನು ಸೂರೆಮಾಡಿ, ಪಟಚ್ಚರರನ್ನು ಅಟವಿಗೋಡಿಸಿ, ನಿಷಾದರಿಗೆ ವಿಷಾದವನ್ನುಂಟುಮಾಡಿ, ಕುಂತಿಭೋಜನಿಗೆ ಚಿಂತೆಯನ್ನಾಚರಿಸಿ, ಜಂಬಕನ ದಂಭವನ್ನು ಮುರಿದು, ಅವಂತಿಯ ವಿಂದಾನುವಿಂದರ ಅಂದವನ್ನು ಕೆಡಿಸಿ, ಭೋಜಕಟನ ರಾಜ್ಯವನ್ನು ಅರಾಜಕವೆನ್ನಿಸಿ, ಕೋಸಲರಾಜನ ಸಿರಿಯು ಮಾಸಿ ಹೋಗುವಂತೆ ಮಾಡಿ, ಹೇರಂಬಕರ ಸಾರವನ್ನು ಮುರಿದು, ಪಾಂಡ್ಯರ ಭುಜದಂಡವನ್ನು ಒಡೆದು, ಕಿಷ್ಕಿಂಧೆಯಲ್ಲಿದ್ದ ವಾನರರಾಜರಾದ ಮೈಂದದ್ವಿವಿದರನ್ನು ವಿಧೇಯರನ್ನಾಗಿ ಮಾಡಿಕೊಂಡು, ಮುಂದಕ್ಕೆ ಹೊರಟು, ಮಾಹಿಷ್ಮತೀಪುರದಲ್ಲಿ ನೀಲಧ್ವಜನೊಡನೆ ಯುದ್ಧಮಾಡಲಾರಂಭಿಸಿ, ಅಗ್ನಿಬಾಧೆಯಿಂದ ಭೀತನಾಗಿ,—ಮುಂದೆ ಏನು ಮಾಡಬೇಕೆಂದು ಯೋಚಿಸುತ್ತಿದ್ದು,—ನೀಲಧ್ವಜನ ಮಗಳು ಅಗ್ನಿಪತ್ನಿಯೆಂಬದಾಗಿಯೂ ಮಾವನ ಮೇಲಣ ಸ್ನೇಹದಿಂದ ಅಗ್ನಿಯು ತನಗೆ ಇದಿರಿಸಿದನೆಂಬದಾಗಿಯೂ ತಿಳಿದು, ಅಲ್ಲಿಯೇ ಧರ್ಭಾಸನದಲ್ಲಿ ಕುಳಿತು, ಅಗ್ನಿಯನ್ನು

ಬಹುಪ್ರಕಾರವಾಗಿ ಸ್ತೋತ್ರಮಾಡಿದನು. ಆಗ ಅಗ್ನಿದೇವನು ಪ್ರಸನ್ನನಾಗಿ, ಸಹದೇವನನ್ನು ಕುರಿತು, " ಎಲೈ ಮಾದ್ರೀಪುತ್ರನೇ, ನಾನು ನಿನಗೆ ಪ್ರಸನ್ನನಾದೆನು; ನಿನ್ನ ಇಷ್ಟಾರ್ಥವು ಕೈಗೂಡುವದು. " ಎಂಬದಾಗಿ ಹೇಳಿ, ಅದೃಶ್ಯನಾದನು. ಅನಂತರದಲ್ಲಿ ನೀಲಧ್ವಜನು ಬಂದು, ಸಹದೇವನನ್ನು ಕಾಣಿಸಿಕೊಂಡು, ಕಪ್ಪಗಳನ್ನು ಕೊಟ್ಟು ಕಳುಹಿಕೊಟ್ಟನು. ಆಮೇಲೆ ಸೌರಾಷ್ಟ್ರಾಧಿಪತಿಯಾದ ಅಕೃತಿಯನ್ನು ಸೋಲಿಸಿ, ರುಕ್ಮಿಯಿಂದ ಸತ್ಕಾರವನ್ನು ಹೊಂದಿ, ಮುಂದೆ ಹೊರಟು, ಶೂರ್ಪಾರಕತಾಲಾಟಕದೇಶಗಳನ್ನು ಸೋಲಿಸಿ, ಪಾಂಡ್ಯ, ದ್ರವಿಡ, ಓಢ್ರ, ಆಂಧ್ರ, ತಾಲವ, ಕಳಿಂಗ, ಉಷ್ಟ್ರ, ಕರ್ಣಾಕಾದಿದೇಶಗಳನ್ನು ಜಯಿಸಿ, ಪೌಲಸ್ತ್ಯನ ಮಗನಾದ ವಿಭೀಷಣನಿಗೆ ಚಾರರನ್ನಟ್ಟಿ, ಅವನು ಕೊಟ್ಟ ಧನಕನಕವಾಹನಾದಿಗಳೊಡನೆ ಹೊರಟು, ತಾನು ತಂದ ವಸ್ತುಗಳನ್ನೆಲ್ಲಾ ಯುಧಿಷ್ಠಿರನ ಪಾದಕಮಲಗಳಿಗೆ ಒಪ್ಪಿಸಿ ನಮಸ್ಕರಿಸಿದನು.

ಅದೇಮೇರೆ ನಕುಲನೂ ಸಹ ಚತುರಂಗಬಲಸಮೇತನಾಗಿ, ಪಶ್ಚಿಮದಿಗಭಿಮುಖವಾಗಿ ಹೊರಟು, ಷಣ್ಮುಖನ ರಾಜಧಾನಿಯಾದ ರೋಹಿತನಗರವನ್ನು ಜಯಿಸಿ, ಸೈರಿಷಕವನ್ನು ಪರಿಗ್ರಹಿಸಿ, ರಾಜರ್ಷಿಯಾದ ಆಕ್ರೋಶನಿಗೆ ವಿಕ್ರಮಭಂಗಮಾಡಿ, ದಶಾರ್ಣವನನ್ನು ದಿಶಾಭಾಗಕ್ಕೋಡಿಸಿ, ಶಿಬಿ, ತ್ರಿಗರ್ತ, ಅಂಬಷ್ಟ, ಮಾಲವ, ಕರ್ಣಾಟ, ಮಾಧ್ಯಮಿಕ, ವಾತಧಾನಾದಿರಾಜ್ಯಗಳನ್ನು ಸ್ವಾಧೀನಪಡಿಸಿಕೊಂಡು, ಸರಸ್ವತೀತೀರವಾಸಿಗಳಾದ ಗೊಲ್ಲರನ್ನೂ, ಶೂದ್ರರನ್ನೂ ಜಯಿಸಿ, ಅಲ್ಲಿಂದ ಹೊರಟು, ಪಂಚನದವನ್ನು ಸ್ವಾಧೀನಪಡಿಸಿಕೊಂಡು, ಅಲ್ಲಿಂದ ನೈರುತ್ಯಮಾರ್ಗವಾಗಿ ಹೊರಟು, ದ್ವಾರಕೆಗೆ ಪ್ರವೇಶಿಸಿ, ಶ್ರೀಕೃಷ್ಣನಿಂದ ಸತ್ಕೃತನಾಗಿ, ಶಾಕಲಪುರವನ್ನು ಆಳುತ್ತಿದ್ದ ತನ್ನ ಮಾವನಾದ ಶಲ್ಯನಿಗೆ ಅಭಿವಂದಿಸಿ, ಅಲ್ಲಿಂದ ಹೊರಟು, ಸಮುದ್ರತೀರದಲ್ಲಿದ್ದ ಮ್ಲೇಚ್ಛ, ಕಿರಾತ, ಪಾಲವ, ಶಕಾದಿಗಳನ್ನು ಸೋಲಿಸಿ, ಅವರ ಭಂಡಾರದಲ್ಲಿದ್ದ ಸಕಲೈಶ್ವರ್ಯವನ್ನು ಸೂರೆಮಾಡಿ, ಅವೆಲ್ಲವನ್ನು ತೆಗೆದುಕೊಂಡು ಇಂದ್ರಪ್ರಸ್ಥಕ್ಕೆ ಹಿಂದಿರುಗಿ, ಧರ್ಮರಾಜನಿಗೆ ಒಪ್ಪಿಸಿದನು.

## ೬. ಪಾಂಡವರು ರಾಜಸೂಯಯಾಗವನ್ನು ಮಾಡಿದ್ದು.

ಹೀಗೆ ತಮ್ಮಂದಿರು ತಂದ ಧನಕನಕವಸ್ತುವಾಹನಾದಿಗಳೂ, ಸಾಮಂತ ನೃಪತಿಗಳು ಯಜ್ಞಕ್ಕೋಸ್ಕರ ತಂದು ಸಮರ್ಪಿಸಿದ ಪದಾರ್ಥಗಳೂ ಸಮೃದ್ಧವಾಗಿರುವದನ್ನು ನೋಡಿ, ಯುಧಿಷ್ಠಿರನು ಯಜ್ಞಕ್ಕೆ ಉಪಕ್ರಮಿಸಬೇಕೆಂದಿದ್ದನು.

ಅಷ್ಟರಲ್ಲಿಯೇ ಶ್ರೀಕೃಷ್ಣನು ಸಕಲಪರಿವಾರದೊಡನೆಯೂ, ಬಂಧುಗಳೊಡನೆಯೂ ದ್ವಾರಕೆಯಿಂದ ಹೊರಟು, ಪಾಂಡವರ ರಾಜಧಾನಿಯನ್ನು ಸೇರಿ, ತಾನು ತಂದ ವಸ್ತುವಾಹನಾದಿಗಳನ್ನು ರಾಜನಿಗೆ ಒಪ್ಪಿಸಿ, ಆತನಿಂದ ಸತ್ಕೃತನಾದನು.

ಆಮೇಲೆ ಧರ್ಮರಾಜನು ಸಹೋದರರೊಡನೆ ಶ್ರೀಕೃಷ್ಣನ ಸಮೀಪಕ್ಕೆ ಹೋಗಿ, "ನಿನ್ನ ಅನುಗ್ರಹದಿಂದ ನನ್ನ ತಮ್ಮಂದಿರು ಸಕಲ ದೇಶಗಳನ್ನು ಜಯಿಸಿ, ಬೇಕಾದಷ್ಟು ಐಶ್ವರ್ಯವನ್ನು ತಂದಿರುವರು. ಯಜ್ಞಕ್ಕೆ ಬೇಕಾದ ಸಾಮಗ್ರಿಗಳೆಲ್ಲವೂ ಸಿದ್ಧವಾಗಿರುವವು. ನನಗೆ ರಾಜಸೂಯಯಾಗವನ್ನು ಮಾಡುವದಕ್ಕೆ ಅಪ್ಪಣೆ ಕೊಡು" ಎಂದು ಬಿನ್ನವಿಸಿದನು.

"ಅಯ್ಯಾ, ಇದೇ ಶುಭವಾದ ಕಾಲವು. ಯಜ್ಞವನ್ನು ಆರಂಭಿಸು." ಎಂದು ಶ್ರೀಕೃಷ್ಣನು ಹೇಳಲು; ಧರ್ಮರಾಜನು ಸಹದೇವನನ್ನು ಕರೆದು, "ನೀನು ಧೌಮ್ಯರು ಹೇಳಿದಂತೆ ಯಜ್ಞಶಾಲೆಯನ್ನು ಕಟ್ಟುವಹಾಗೆ ಶಿಲ್ಪಿಗಳಿಗೆ ಆಜ್ಞಾಪಿಸು. ಯಜ್ಞಕ್ಕೆ ಬೇಕಾದ ಸಾಮಗ್ರಿಗಳನ್ನು ಒದಗಿಸುವಹಾಗೆ ರುಕ್ಮನೇ ಮೊದಲಾದವರಿಗೆ ನಿಯಮಿಸು. ಯಜ್ಞಶಾಲೆಯಲ್ಲಿಯೂ, ಬೀಡಾರಗಳಲ್ಲಿಯೂ ಹೋಗಿ, ಸಮಯವನ್ನರಿತು ಸೇವೆ ಮಾಡುವಂತೆ ಜನಗಳಿಗೆ ಹೇಳು. ಯಜ್ಞಶಾಲೆಯ ಸುತ್ತಲೂ ಅರಸರಿಗೆ ಬೀಡಾರವನ್ನು ಕಲ್ಪಿಸು. ಚತುರ್ವರ್ಣದವರಿಗೂ ಯಜ್ಞಕ್ಕೆ ಬರುವಂತೆ ಆಹ್ವಾನಪತ್ರಿಕೆಯನ್ನು ಬರೆಯಿಸು." ಎಂದುಹೇಳಿದನು.

ಸಹದೇವನ ಆಜ್ಞಾನುಸಾರವಾಗಿ ಶಿಲ್ಪಿಗಳು ಶಾಸ್ತ್ರೋಕ್ತರೀತಿಯಲ್ಲಿ ಯಜ್ಞಶಾಲೆಯನ್ನು ನಿರ್ಮಿಸಿದ್ದಲ್ಲದೆ, ಅದರ ಸುತ್ತಲೂ ಯಜ್ಞವನ್ನು ನೋಡುವದಕ್ಕೆ ಬಂದು ಸೇರುವ ಜನಗಳ ಸೌಕರ್ಯಕ್ಕಾಗಿ ಅಲ್ಲಲ್ಲಿ ಮಂಟಪಗಳನ್ನೂ, ತೋಟಗಳನ್ನೂ ಕೊಳಗಳನ್ನೂ, ಬಾವಿಗಳನ್ನೂ ಕಲ್ಪಿಸಿದರು.

ಕೂಡಲೆ, ನಾನಾದೇಶದಿಂದ ಬಂದ ನಾನಾ ವರ್ಣದ ಜನರನ್ನೂ ಅವರವರ ಯೋಗ್ಯತಾನುಸಾರವಾಗಿ, ಕೆಲವರನ್ನು ಅರಮನೆಯಲ್ಲಿಯೂ, ಮತ್ತೆ ಕೆಲವರನ್ನು ಬೀಡಾರಗಳಲ್ಲಿಯೂ, ಇತರರನ್ನು ಮಂಟಪಗಳಲ್ಲಿಯೂ ಇಳಿಸಿ, ಅವರವರಿಗೆ ಬೇಕಾದ ಉಪಚಾರಗಳನ್ನು ಮಾಡುವದಕ್ಕೋಸ್ಕರ ದಾಸದಾಸೀ ಜನಗಳನ್ನು ನೇಮಿಸಿ, ಒಟ್ಟು ಪರಾಮರಿಕೆಯನ್ನು ಸಹದೇವನು ತಾನಾಗಿ ನೋಡಿಕೊಳ್ಳುತ್ತಿದ್ದನು.

ಧರ್ಮನಂದನನು ತನ್ನ ಆಜ್ಞೆಯ ಮೇರೆ ನಕುಲನು ಕರೆದುಕೊಂಡು ಬಂದ ಭೀಷ್ಮ, ಧೃತರಾಷ್ಟ್ರ, ವಿದುರ, ದ್ರೋಣ, ಕೃಪ, ಅಶ್ವತ್ಥಾಮ, ಶಕುನಿ, ಸೈಂಧವ, ದುರ್ಯೋಧನ, ದುಶ್ಶಾಸನರೇ ಮೊದಲಾದವರನ್ನು ಸತ್ಕರಿಸಿ ಅರಮನೆಯಲ್ಲಿ ಇಳಿಸಿದನು.

ಬಳಿಕ ಬಂದ ನೃಪತಿಗಳೆಲ್ಲರೂ ಸಭೆಯಲ್ಲಿ ಕುಳಿತಿರುವಾಗ, ಧರ್ಮರಾಯನು ಕೈಗಳನ್ನು ಜೋಡಿಸಿ ನಿಂತು ಇಂತೆಂದನು:—“ ಎಲೈ ಬಂಧುಗಳಿರಾ, ನಿಮ್ಮ ಸಹಾಯದಿಂದಲೆ ಈ ಮಹಾಕಾರ್ಯಕ್ಕೆ ಯತ್ನಿಸಿರುವೆನು. ಈ ಕಾರ್ಯಕ್ಕೆ ಯಾವ ವಿಘ್ನವೂ ಬಾರದಂತೆ ನೆರವೇರಿಸುವದು ನಿಮ್ಮ ಭಾರವಾಗಿದೆ. ಮುಖ್ಯವಾಗಿ ನಮ್ಮ ಕುಲ ಪಿತಾಮಹರಾದ ನೀವು ಮಕ್ಕಳಾದ ನಮ್ಮಲ್ಲಿ ಪೂರ್ಣಾನುಗ್ರಹವನ್ನಿಟ್ಟು ಯಾವ ಯಾವ ಕೆಲಸವು ಯಾವ ಯಾವರೀತಿಯಲ್ಲಿ ನಡೆಯಬೇಕೋ, ಅದನ್ನೆಲ್ಲಾ ನಡೆಯಿಸಬೇಕು. ನಮ್ಮ ಗುರುಗಳಾದ ನೀವು ಇದರಲ್ಲಿ ಯಾವ ಕುಂದಕವೂ ಬಾರದಂತೆ ನೋಡಿಕೊಳ್ಳಬೇಕು. ಸ್ವಾಮಿಾ ಕೃಪಾಚಾರ್ಯರೇ, ದಕ್ಷಿಣೆಯನ್ನು ಕೊಡುವ ಕೆಲಸಕ್ಕೆ ನೀವನುಮತಿಸಬೇಕು. ಅಯ್ಯಾ ವಿದುರನೇ, ಎಲ್ಲವೂ ಸರಿಯಾಗಿ ನಡೆಯಿತೋ ಇಲ್ಲವೋ ನೀನು ನೋಡಿಕೊಳ್ಳಬೇಕು. ಅಯ್ಯಾ ಅಶ್ವತ್ಥಾಮನೇ, ಬಂದ ಬ್ರಾಹ್ಮಣರಿಗೆ ಯಥಾಯೋಗ್ಯವಾಗಿ ಉಪಚಾರ ಮಾಡಿಸುವದು ನಿನಗೆ ಸೇರಿದ್ದು. ಅಯ್ಯಾ ದುರ್ಯೋಧನ, ನಾನಾ ದೇಶದ ನೃಪತಿಗಳು ತಂದ ಧನಕನಕವಸ್ತುವಾಹನಾದಿಗಳನ್ನು ಒಂದು ಕಡೆಯಲ್ಲಿರಿಸಿ ಪ್ರಕೃತ ಬಿದ್ದಹಾಗೆ ವ್ಯಯಮಾಡುವದು ನಿನ್ನ ಕೆಲಸ. ಸ್ವಾಮಿಾ ಸಂಜಯರೇ, ರಾಜರುಗಳ ಸತ್ಕಾರವನ್ನು ತಾವು ನೋಡಿಕೊಳ್ಳಬೇಕು. ದು

ಶ್ಯಾಸನ, ಅಭ್ಯಾಗತರು ಭಕ್ಷ್ಯಭೋಜ್ಯಾದಿಗಳಿಂದ ತೃಪ್ತರಾದರೇ ಇಲ್ಲವೇ ನೋಡಿಕೊಳ್ಳತಕ್ಕದ್ದು ನಿನ್ನ ಭಾರ. " ಎಂದು ಒಬ್ಬೊಬ್ಬರನ್ನು ಒಂದೊಂದು ಕಾರ್ಯವನ್ನು ನೋಡಿಕೊಳ್ಳುವಂತೆ ಪ್ರಾರ್ಥಿಸಿಕೊಂಡನು. ಅವರೆಲ್ಲರೂ " ಹಾಗೆಯೇ ಆಗಲಿ. " ಎಂದು ಅನುಮತಿಸಿದರು.

ಶ್ರೀಕೃಷ್ಣನು " ಅಯ್ಯಾ ಧರ್ಮರಾಜನೆ, ಬಂದ ಬ್ರಾಹ್ಮಣರಿಗೆ ಉಪಚಾರ ಮಾಡುವದು ನನ್ನ ಭಾಗಕ್ಕಿರಲಿ. " ಎಂದು ತಾನೇ ಆ ಕೆಲಸವನ್ನು ವಹಿಸಿಕೊಂಡನು.

ಅನಂತರ ಧರ್ಮರಾಜನು ಯಜ್ಞದೀಕ್ಷೆಯನ್ನು ವಹಿಸಿ ಬ್ರಾಹ್ಮಣರೊಡನೆಯೂ, ಕ್ಷತ್ರಿಯರೊಡನೆಯೂ, ಬಂಧುಗಳೊಡನೆಯೂ ಒಂದು ಶುಭಮುಹೂರ್ತದಲ್ಲಿ ಸಕಲವಿಭವದೊಡನೆ ಯಜ್ಞಶಾಲೆಯನ್ನು ಪ್ರವೇಶಿಸಿದನು.

ಆಗ ಯಜ್ಞಶಾಲೆಯು ವೇದಘೋಷದಿಂದಲೂ, ಬ್ರಾಹ್ಮಣರ ಆಶೀರ್ವಾದ ಧ್ವನಿಗಳಿಂದಲೂ, ಒಬ್ಬನ ಮಾತು ಮತ್ತೊಬ್ಬನಿಗೆ ತಿಳಿಯದಹಾಗೆ ಶಬ್ದಮಯವಾಯಿತು. ಅಲ್ಲಿ ಯಾಜ್ಞವಲ್ಕ್ಯನು ಅಧ್ವರ್ಯುವಾದನು; ದ್ವೈಪಾಯನನುಬ್ರಹ್ಮನಾದನು; ಸುನಾಮನು ಉದ್ಗಾತೃವಾದನು; ಮಿಕ್ಕ ಬ್ರಾಹ್ಮಣರೆಲ್ಲಾ ಬ್ರಾಹ್ಮಣ್ಯರಾದರು; ನಾರದಾದಿ ಮಹಾಮುನೀಂದ್ರರು ಸದಸ್ಯರಾದರು; ಭೀಷ್ಮಾದಿರಾಜರ್ಷಿಗಳು ಸಭಾಸದರಾದರು; ಆ ಮಹಾಯಜ್ಞವು ಮಂತ್ರಲೋಪ ಕ್ರಿಯಾಲೋಪ ದ್ರವ್ಯಲೋಪ ಮೊದಲಾದವುಗಳು ಯಾವದೂ ಇಲ್ಲದೆ, ಸಕಲಜನಸಮ್ಮತಿಯಿಂದ ನಿರ್ವಿಘ್ನವಾಗಿ ಬೆಳೆಯಿತು. ಆ ಯಜ್ಞದಲ್ಲಿ ಅಗ್ನಿಮುಖದಲ್ಲಿ ವಿಸ್ತಾರವಾದ ಮಂತ್ರಾಹುತಿಗಳಿಂದ ಸಕಲದೇವತೆಗಳೂ, ವಿಶೇಷವಾದ ದಕ್ಷಿಣೆಗಳಿಂದ ಬ್ರಾಹ್ಮಣರೂ, ಯೋಗ್ಯವಾದ ಮರ್ಯಾದೆಗಳಿಂದ ಸಕಲ ನೃಪಾಲರೂ ತಮತಮಗೆ ಇಷ್ಟವಾದ ಭೋಜನ, ವಸ್ತ್ರ, ಆಭರಣ ಮೊದಲಾದವುಗಳನ್ನು ಹೊಂದಿದುದರಿಂದ ಸರ್ವಪ್ರಜೆಗಳೂ, ಬೇಡಿದ ವಸ್ತುವನ್ನು ಹೊಂದಿದುದರಿಂದ ಯಾಚಕರೂ ದಣಿದರು.

## ೩. ಪಾಂಡವರು ರಾಜರುಗಳಿಗೆ ಅರ್ಘ್ಯವನ್ನು ಕೊಟ್ಟದ್ದು.

ಯಜ್ಞವು ಪೂರ್ತಿಯಾದ ಬಳಿಕ ಯುಧಿಷ್ಠಿರಮಹಾರಾಜನ ಅವಭೃಥ ಸ್ನಾನವನ್ನು ನೆರವೇರಿಸಲು ಬ್ರಾಹ್ಮಣೋತ್ತಮರೂ, ಋಷಿಪುಂಗವರೂ, ರಾಜಶ್ರೇಷ್ಠರೂ, ಅಂತರ್ವೇದಿಯನ್ನು ಪ್ರವೇಶಿಸಿ, ಅಲ್ಲಿ ಸುಖಾಸನಗಳಲ್ಲಿ ಕುಳಿತುಕೊಂಡು, ಅನೇಕವಾದ ಸಂಗತಿಗಳ ವಿಷಯವಾಗಿ ಮಾತನಾಡತೊಡಗಿದರು. ಆಗ ಕೆಲವರು, " ಇದಮಿತ್ಥಂ. " ಎಂಬದಾಗಿಯೂ; ಮತ್ತೆ ಕೆಲವರು " ನೇದಮಿತ್ಥಂ. ", "ಇತ್ಥಮಿದಂ, ನಾನ್ಯಥಾ. " ಎಂಬದಾಗಿಯೂ ವಾಕ್ಕಲಹಗಳನ್ನು ಮಾಡುತ್ತಲೂ; ಮತ್ತೆ ಕೆಲವರು ತಮ್ಮ ಬುದ್ಧಿಚಾತುರ್ಯದಿಂದ ಅಲ್ಪವಾದ ಅರ್ಥವನ್ನು ಮಹತ್ತಾಗಿಯೂ, ಮಹತ್ತಾದ ಅರ್ಥವನ್ನು ಅಲ್ಪವಾಗಿಯೂ ತೋರ್ಪಡಿಸುತ್ತಲೂ; ಇತರರು ಧರ್ಮೋಪದೇಶವನ್ನು ಮಾಡುತ್ತಲೂ; ಮತ್ತೆ ಕೆಲವರು ಸುಖಸಂಕಥಾಲಾಪಗಳನ್ನು ಮಾಡುತ್ತಲೂ, ಇರುತ್ತಿದ್ದರು.

ನಾರದಮುನಿಯು ಯುಧಿಷ್ಠಿರನ ಸಂಪತ್ತಿಗೂ ಪುಣ್ಯಕ್ಕೂ ಹಿಗ್ಗಿ, ಹಾಗೆಯೇ ನಾಲ್ಕು ಕಡೆಯಲ್ಲಿಯೂ ಸಭೆಯನ್ನು ನೋಡಿ, ದೇವತೆಗಳೆಲ್ಲರೂ ಮನುಷ್ಯಲೋಕದಲ್ಲಿ ಹುಟ್ಟಬೇಕೆಂಬದಾಗಿ ಹಿಂದೆ ಬ್ರಹ್ಮನ ಸಭೆಯಲ್ಲಿ ನಡೆದ ಮಾತನ್ನೂ, ದೇವತೆಗಳೆಲ್ಲಾ ಭೂಲೋಕದಲ್ಲಿ ಜನ್ಮವನ್ನು ಪಡೆದು ಒಬ್ಬೊರೊಬ್ಬರನ್ನು ಕೊಂದು ಪುನಃ ದೇವಲೋಕಕ್ಕೆ ಬರಬೇಕೆಂಬ ಸೃಷ್ಟಿಗಧೀಶನಾದ ನಾರಾಯಣನ ವಾಕ್ಯವನ್ನೂ, ನಾರಾಯಣನೇ ಯದುಕುಲದ ಅಂಧಕವೃಷ್ಣಿವಂಶದಲ್ಲಿ ಅವತರಿಸಿದ್ದನ್ನೂ, ಅಲ್ಲಿ ನೆರೆದಿದ್ದ ಕ್ಷತ್ರಿಯರುಗಳ ಆಯುಶ್ಶೇಷವನ್ನೂ ನೆನೆನೆನೆದು, ವಿಭ್ರಾಂತನಾಗಿ ಕುಳಿತಿದ್ದನು.

ಆಗ ಭೀಷ್ಮನು " ಅಪ್ಪಾ ಯುಧಿಷ್ಠಿರ, ಇಲ್ಲಿರುವ ರಾಜರುಗಳಿಗೆಲ್ಲಾ ಅವರವರಿಗುಚಿತವಾದ ರೀತಿಯಲ್ಲಿ ಅರ್ಘ್ಯವನ್ನು ಕೊಡು. ಗುರು, ಪುರೋಹಿತ, ಬಂಧು, ಸ್ನಾತಕ, ಮಿತ್ರ, ಕ್ಷತ್ರಿಯರೆಂಬ ಆರುಮಂದಿಗಳಲ್ಲಿ ಯಾರೊಬ್ಬರು ಒಂದು ವರುಷಕಾಲ ನಮ್ಮೊಡನೆ ವಾಸಮಾಡಿದರೂ ಅರ್ಘ್ಯಾರ್ಹರಾಗುವರೆಂದು ಹಿರಿಯರು ಹೇಳುವರು. ಈ ರಾಜರುಗಳೆಲ್ಲಾ ನಮ್ಮೊಡನೆ ಕೆಲವು ಕಾಲವಿದ್ದದರಿಂದ ಅವರೆಲ್ಲರಿಗೂ ಅರ್ಘ್ಯವನ್ನು ಕೊಡು. ಇವರಲ್ಲಿ ಯಾರು

ಪ್ರಮುಖರೋ ಅವರಿಗೆ ಅಗ್ರಪೂಜೆಯನ್ನು ಮಾಡು. ಇಲ್ಲಿ ಶ್ರೀಕೃಷ್ಣನಿಗಿಂತಲೂ ಅಗ್ರಪೂಜಾರ್ಹರು ಮತ್ತೆಯಾರು? ಆದುದರಿಂದ ನೀನು ಮೊದಲು ಶ್ರೀಕೃಷ್ಣನನ್ನು ಪೂಜಿಸು. ಅನಂತರದಲ್ಲಿ ಮಿಕ್ಕವರನ್ನು ಆರಾಧಿಸು." ಎಂದು ಹೇಳಿದನು.

ಧರ್ಮರಾಜನು ಅಪ್ಪಣೆ ಕೊಟ್ಟಂತೆ ಸಹದೇವನು ಚಿನ್ನದ ಮಂಚದ ಮೇಲಕ್ಕೆ ಶ್ರೀಕೃಷ್ಣನಿಗೆ ಕೈಕೊಟ್ಟು, ಕರೆದುಕೊಂಡು ಬಂದು, ದಿವ್ಯಸಿಂಹಾಸನದಲ್ಲಿ ಕುಳ್ಳಿರಿಸಿ, ಹರಿವಾಣದಲ್ಲಿ ಗಂಗೆಯ ನೀರನ್ನು ತಂದು, ಶ್ರೀಕೃಷ್ಣನ ಪಾದವನ್ನು ತೊಳೆದು, ಹದಿನಾರು ವಿಧವಾದ ಪೂಜೆಗಳನ್ನೂ ಮಾಡಿದನು. ಆಗ ದೇವಮುನಿಗಳೂ, ಬ್ರಹ್ಮರ್ಷಿಗಳೂ "ಜಯ ಜಯ" ಎಂದು ಹೊಗಳಿದರು; ದೇವ ದುಂದುಭಿಗಳು ಮೊಳಗಿದವು.

ಇವುಗಳನ್ನೆಲ್ಲಾ ನೋಡಿ ಸಹಿಸಲಾರದೆ ಚೇದಿದೇಶಾಧಿಪತಿಯಾದ ಶಿಶುಪಾಲನು ಕೋಪವನ್ನು ತಾಳಿ, ಕಠಿನೋಕ್ತಿಗಳನ್ನು ಆಡತೊಡಗಿದನು:—"ಈ ರಾಜಶ್ರೇಷ್ಠರ ಮಂಡಲಿಯಲ್ಲಿ ವೃಷ್ಣಿಕುಲದ ಇವನು ಅಗ್ರಪೂಜೆಗೆ ಯೋಗ್ಯನೆ? ಇವನ ಪೂಜೆಗೆ ಒಡಂಬಟ್ಟ ನಿನ್ನ ನಡತೆ ಪಾಂಡವರಿಗೆ ಯೋಗ್ಯವಾದದ್ದೆ? ಎಲೈ ಪಾಂಡವರಿರಾ, ನೀವು ಇನ್ನೂ ಮಕ್ಕಳಾಟದವರು. ನಿಮಗೆ ಪೂಜ್ಯಾಪೂಜ್ಯತಾರತಮ್ಯವು ತಿಳಿಯುತ್ತದೆಯೆ? ನಿಮಗೆ ಮಂತ್ರಾಲೋಚನೆಯನ್ನು ಈ ರೀತಿಯಲ್ಲಿ ಹೇಳಿದ ಗಂಗಾಪುತ್ರನ ಪ್ರಾಜ್ಞತೆಯನ್ನು ಏನೆಂದು ಹೇಳಲಿ? ಎಲೈ ಭೀಷ್ಮನೇ, ಸುಗುಣಿಯಾಗಿಯೂ, ವಿವೇಕಿಯಾಗಿಯೂ ಇರುವ ನಿನ್ನಂಥವನು ಯಾವದೋ ಒಂದು ಆಶೋತ್ತರವನ್ನಿಟ್ಟುಕೊಂಡು ಈ ಮೇರೆ ನಡಿಸಿದರೆ, ನಿನ್ನನ್ನು ಜರೆಯುವರಲ್ಲದೆ ತಿಳಿದವರು ನಿನ್ನ ಕೆಲಸಕ್ಕೆ ಒಪ್ಪುವರೆ? ಎಲೈ ಯುಧಿಷ್ಠಿರ, ದಶಾರ್ಹರಲ್ಲಿ ಹುಟ್ಟಿದ ಈ ಕೃಷ್ಣನಿಗೆ ಈ ರಾಜಮಂಡಲಿಯಲ್ಲಿ ಪೂಜೆ ಮಾಡಿದೆಯಲ್ಲ! ಯಾವ ಯೋಗ್ಯತೆಯನ್ನು ಕಂಡು ಮಾಡಿದೆ? ಏನು ವಯೋವೃದ್ಧನೆಂದು ಮಾಡಿದೆಯಾ? ಆ ಪಕ್ಷಕ್ಕೆ ಅವನ ತಂದೆಯಾದ ವಸುದೇವನಿಲ್ಲವೆ? ಹಿತಚಿಂತಕನೆಂದು ಬಗೆದರೆ ದ್ರುಪದನಿಲ್ಲವೆ? ಗುರುಪೂಜೆಯನ್ನು ಮಾಡಬೇಕೆಂದಿದ್ದರೆ ದ್ರೋಣನಿಲ್ಲವೆ? ನೀನೇನು ಕೃಷ್ಣನನ್ನು ಋತ್ವಿಜನೆಂದು

ನೆನೆದೆಯೋ? ವೃದ್ಧನಾದ ದ್ವೈಪಾಯನನಿಲ್ಲವೆ? ವೃದ್ಧನೂ, ಪೂಜ್ಯನೂ ಆದ ಶಂತನುಪುತ್ರನಾದ ಭೀಷ್ಮನಿಲ್ಲವೆ? ಅಶ್ವತ್ಥಾಮಕೃಪಾದಿಗಳಿಲ್ಲವೆ? ವೀರನೆಂದು ನೆನೆದರೆ ದುರ್ಯೋಧನ, ಏಕಲವ್ಯ, ರುಕ್ಮಿ, ಶಲ್ಯ, ಕರ್ಣಾದಿ ಮಹಾವೀರಾಗ್ರಣಿಗಳಿಲ್ಲವೆ? ಇವರೆಲ್ಲರನ್ನೂ ಬಿಟ್ಟು, ಕೃಷ್ಣನಲ್ಲಿ ಯಾವ ಯೋಗ್ಯತೆಯನ್ನು ಕಂಡು, ಅವನಿಗೆ ಅಗ್ರಪೂಜೆಯನ್ನು ಮಾಡಿದೆ? ಇವನೇನು ಗುರುವೇ, ಪುರೋಹಿತನೇ, ದೊರೆಯೇ? ಇವನನ್ನು ಯಾವ ಪದಾರ್ಥವೆಂದು ಇವನಿಗೆ ಅಗ್ರಪೂಜೆ ಮಾಡಿಸಿದೆ? ನೀನು ಯಾವದೋ ಒಂದು ಆಶೋತ್ತರದಿಂದ ಹೀಗೆ ಮಾಡಿರಬೇಕಲ್ಲದೆ, ಬೇರೆಯಿಲ್ಲ. ನೀನೇ ಇವನನ್ನು ಪೂಜಿಸಬೇಕೆಂದಿದ್ದರೆ, ನಮ್ಮನ್ನೆಲ್ಲಾ ಯಾತಕ್ಕೆ ಕರೆದು, ಈ ರೀತಿ ಅವಮಾನ ಮಾಡಿಸಬೇಕು? ನಾವು ಭೀತಿಯಿಂದಾಗಲಿ, ಸಾಮೋಪಾಯದಿಂದಾಗಲಿ, ನಿನಗೆ ಕಪ್ಪವನ್ನು ಕೊಟ್ಟವರಲ್ಲ; ನೀನು ಧರ್ಮಪ್ರವರ್ತಕನೆಂದು ಕೊಟ್ಟೆವು. ಅದಕ್ಕೆ ಇದೀಗ ಪ್ರತ್ಯುಪಕಾರ! ನೀನು ನಮಗೆ ಅವಮಾನವನ್ನು ಮಾಡಬೇಕೆಂಬದಾಗಿ ಪರ್ಯಾಲೋಚನೆ ಮಾಡಿಕೊಂಡು, ಈ ಪ್ರಕಾರ ನಡಿಸಿರುತ್ತೀಯೆ. ಹಾಗಲ್ಲದಿದ್ದರೆ, ಕ್ಷತ್ರಿಯ ಕುಲೋತ್ಪನ್ನನಲ್ಲದ ಇವನಿಗೆ ನಮ್ಮ ಮಧ್ಯದಲ್ಲಿ ಹ್ಯಾಗೆ ತಾನೆ ಅಗ್ರಪೂಜೆ ಮಾಡಿದೆ? ಯುಧಿಷ್ಠಿರನೇ, ನಿನಗೆ ಧರ್ಮಪ್ರವರ್ತಕನೆಂದು ಲೋಕದಲ್ಲಿ ಉಂಟಾದ ಪ್ರಖ್ಯಾತಿಯು ನಿರರ್ಥಕವಾದದ್ದು. ಹೀಗೆ ಯಾರುತಾನೆ ಮಾಡುವರು? ಎಲೋ, ಕೃಷ್ಣಾ, ಕುಂತಿಯ ಮಕ್ಕಳು ಹೆದರಿಕೊಂಡು ಈ ರೀತಿ ಮಾಡಿದರೆ, ನಿನಗೆ ಬುದ್ಧಿ ಎಲ್ಲಿತ್ತು? ನೀನು ಯಾತಕ್ಕೆ ನಿನ್ನ ಯೋಗ್ಯತೆಯನ್ನು ಅವರಿಗೆ ಹೇಳಬಾರದಾಗಿತ್ತು? ನಿನ್ನ ಯೋಗ್ಯತೆಗೆ ಮೀರಿದ ಈ ಮನ್ನಣೆಯನ್ನು ತೆಗೆದುಕೊಳ್ಳುವದಕ್ಕೆ ನಿನಗೆ ಹ್ಯಾಗೆತಾನೆ ಕೈಗಳು ಬಂದವು? ಎಂದೂ ಕಾಣದ ನಾಯಿಗೆ ಸ್ವಲ್ಪ ಹವಿಸ್ಸು ಸಿಕ್ಕಿದರೆ ಮೂಲೆಯಲ್ಲಿ ಕುಳಿತು ನೆಕ್ಕುವಂತೆ, ನಿನಗೆ ಮಾಡಿದ ಬಹುಮಾನವನ್ನು ಮಹತ್ತಾಗಿ ಭಾವಿಸುತ್ತೀಯೆ! ಎಲೋ ಗೋಪಾಲಾ, ಇದರಿಂದ ರಾಜರುಗಳಿಗೇನೂ ಅವಮಾನವಾಗಲಿಲ್ಲ; ನಿನಗೇ ಮೂಗು ಹೋದಂತಾಯಿತು. ಕುರುಡನಿಗೆ ರೂಪವು ಹ್ಯಾಗೋ, ಅಯೋಗ್ಯನಾದ ನಿನಗೆ ಈ ಅಗ್ರಪೂಜೆಯು ಹಾಗೆಯೇ ಸರಿ. ಇದರಿಂದ ಯುಧಿಷ್ಠಿರನ ಸ್ವರೂಪ

ವೂ, ಭೀಷ್ಮನ ಸ್ವರೂಪವೂ, ನಿನ್ನ ಸ್ವರೂಪವೂ ಚೆನ್ನಾಗಿ ಗೊತ್ತಾಯಿತು! ಎಲೈ, ರಾಜರುಗಳಿರಾ, ಏಳಿರಿ. ಹೋಗೋಣ." ಎಂದು ಹೇಳಿ, ಆಸನದಿಂದ ಎದ್ದು ರಾಜರುಗಳೊಡನೆ ಸಭೆಯಿಂದ ಹೊರಟುಹೋದನು.

ಯುಧಿಷ್ಠಿರನು ಶಿಶುಪಾಲನ ಹಿಂದೆಯೇ ಜಾಗ್ರತೆಯಾಗಿ ಹೋಗಿ, "ಎಲೈ, ಮಹಾರಾಜನೇ, ನೀನು ಹೀಗೆ ಹೇಳಿದ್ದು ನಿನಗೆ ತಕ್ಕದ್ದಲ್ಲ. ನೀನು ನಿಷ್ಕಾರಣವಾಗಿ ಇಷ್ಟು ಕ್ರೂರವಾದ ವಾಕ್ಯಗಳನ್ನು ಹೇಳಿದ್ದು ಬಹಳ ಪಾಪಕರವಾದದ್ದು. ಭೀಷ್ಮನಿಗೆ ಧರ್ಮಮಾರ್ಗವು ತಿಳಿಯದೆಂದು ಧಿಕ್ಕರಿಸಬೇಡ. ಭೀಷ್ಮನು ಮಾಡಿಸಿದ್ದಕ್ಕೆ ನಿನಗಿಂತಲೂ ದೊಡ್ಡವರಾದ ರಾಜರುಗಳೆಲ್ಲರೂ ಒಪ್ಪಿಕೊಂಡಿರುವರು. ನೀನೂ ಅವರಂತೆಯೇ ನಡೆಯಬೇಕು. ಭೀಷ್ಮನು ಶ್ರೀಕೃಷ್ಣನನ್ನು ಚೆನ್ನಾಗಿ ತಿಳಿದಿರುವನು. ನಿನಗೆ ಶ್ರೀಕೃಷ್ಣನ ವಿಷಯವು ಅಷ್ಟು ಚೆನ್ನಾಗಿ ತಿಳಿಯದು." ಎಂದು ಹೇಳಿ, ಸಮಾಧಾನಮಾಡುತ್ತಿದ್ದನು.

ಅಷ್ಟರಲ್ಲಿಯೇ ಭೀಷ್ಮನು ಎದ್ದು "ಪುರಾಣಪುರುಷನಾದ ಶ್ರೀಕೃಷ್ಣನ ಅಗ್ರಪೂಜೆಗೆ ಒಡಂಬಡದವರನ್ನೂ ಸಮಾಧಾನಪಡಿಸತಕ್ಕ ಅವಶ್ಯಕವಿಲ್ಲ. ಯುದ್ಧದಲ್ಲಿ ಶತ್ರುವನ್ನು ಜಯಿಸಿ, ತನಗೆ ವಶನಾದ ಬಳಿಕ ಅವನನ್ನು ನಿರ್ಬಂಧಿಸದೆ ಬಿಡುವಾತನೇ ಕ್ಷತ್ರಿಯಗುರುವೆನ್ನಿಸುವನು. ಈ ರಾಜಸಭೆಯಲ್ಲಿ ಶ್ರೀಕೃಷ್ಣನಿಗೆ ಇದಿರು ನಿಂತು ಸೋಲದವರನ್ನು ಯಾರನ್ನೂ ಕಾಣೆನು. ನಾವು ಬಾಂಧವ್ಯಕ್ಕೋಸ್ಕರವಾಗಿಯೇ ಆಗಲಿ, ಆತನಿಂದ ನಮಗಾಗುವ ಸಹಾಯಕ್ಕೋಸ್ಕರವಾಗಿಯೇ ಆಗಲಿ ಕೃಷ್ಣನಿಗೆ ಪೂಜೆ ಮಾಡಿದವರಲ್ಲ. ಆತನ ಅನ್ಯಾದೃಶವಾದ ಪರಾಕ್ರಮಕ್ಕೂ, ಅಸದೃಶವಾದ ವೇದವೇದಾಂಗಾದಿ ಪಾಂಡಿತ್ಯಕ್ಕೂ ತಕ್ಕಂತೆ ಪೂಜಿಸಿದೆವು. ದಾನವೂ, ಶೀಲವೂ, ವಿನಯವೂ, ಸೌಂದರ್ಯವೂ ಅವನಲ್ಲಿ ನೆಲೆಗೊಂಡಿವೆ. ನಮಗೆ ಆತನೇ ಮಿತ್ರನೂ, ಗುರುವೂ, ಸ್ನಾತಕನೂ, ಬಂಧುವೂ ಆಗಿರುವದರಿಂದ ಆತನನ್ನು ಆದಿಯಲ್ಲಿ ಪೂಜಿಸಿದೆವು. ಮೂಲಪ್ರಕೃತಿಸ್ವರೂಪನಾದ ಶ್ರೀಕೃಷ್ಣನ ಪೂಜೆಗೆ ಯಾವನು ತಾನೆ ಆಕ್ಷೇಪಣೆಮಾಡಲಾಪನು? ಶಿಶುಪಾಲನಿಗೆ ಇದು ಸಮರ್ಪಕವಾಗದ ಪಕ್ಷಕ್ಕೆ ಅವನು ಇಷ್ಟಬಂದಂತೆ ನಡೆಯಬಹುದು." ಎಂದು ಹೇಳಿದನು.

ಇವನು ನಿಲ್ಲಿಸಿದ ಕೂಡಲೆ ಸಹದೇವನು ಎದ್ದು, "ಶ್ರೀಕೃಷ್ಣನ ಪೂಜೆಗೆ ಆಕ್ಷೇಪಿಸುವವನ ತಲೆಯ ಮೇಲೆ ಹೀಗೆಯೇ ನನ್ನ ಎಡಗಾಲನ್ನು ಇಡುವೆನು." ಎಂದು, ತನ್ನ ಎಡಗಾಲನ್ನೆತ್ತಿ ತೋರಿಸಿದನು. ಆಗ ಸಹದೇವನ ತಲೆಯಲ್ಲಿ ಪುಷ್ಪವೃಷ್ಟಿಯು ಕರೆಯಿತು. "ಯುಕ್ತವು, ಯುಕ್ತವು" ಎಂದು ಅಶರೀರ ವಾಕ್ಯಾಯಿತು. ಸಕಲವಿಷಯವನ್ನೂ ತಿಳಿದ ನಾರದನು ಎಲ್ಲರ ಸಂಶಯವನ್ನು ಹೋಗಲಾಡಿಸುವದಕ್ಕಾಗಿ, "ಶ್ರೀಕೃಷ್ಣನನ್ನು ಯಾರು ಪೂಜಿಸುವದಿಲ್ಲವೋ, ಅವರು ಬದುಕಿದ್ದರೂ ಸತ್ತವರಂತೆಯೇ; ಅವರೊಡನೆ ಸಂಭಾಷಣೆಯೇ ಕೂಡದು." ಎಂದು ಕೂಗಿ ಹೇಳಿದನು. ಆಗ ದೊರೆಗಳೆಲ್ಲರೂ ಮೂಗು ಮೆಟ್ಟಿದವರಂತೆ ತಲೆಯನ್ನು ಜೋಲುಹಾಕಿಕೊಂಡು ಕುಳಿತುಕೊಂಡಿದ್ದರು. ಶಿಶುಪಾಲನು ಮಾತ್ರ ಕಣ್ಣುಗಳಲ್ಲಿ ಕೆಂಡವನ್ನುಗುಳುತ್ತಾ ರಾಜಕುಲವನ್ನು ನೋಡಿ, "ನಾನು ಸೈನ್ಯಾಧಿಪನಾಗಿ ನಡಿಸುವಲ್ಲಿ ನೀವೆಲ್ಲರೂ ಹೇಡಿಗಳಂತೆ ಯಾತಕ್ಕೆ ಕುಳಿತಿರುವಿರಿ?" ಎಂದು ಹೇಳಲು; ಎಲ್ಲರೂ ತಮ್ಮ ತಮ್ಮ ಸೈನ್ಯಗಳೊಡನೆ ಯುದ್ಧಕ್ಕೆ ಸನ್ನದ್ಧರಾದರು.

## ೮. ಶಿಶುಪಾಲ ವಧೆ.

ಪ್ರಳಯ ಕಾಲ ಪ್ರಭಂಜನ ಸಂಕ್ಷುಭಿತಾಬ್ಧಿಯಂತೆ ಉದ್ಘೋಷಿಸುವ ರಾಜಸಮೂಹವನ್ನು ನೋಡಿ, ಯುಧಿಷ್ಠಿರನು ಭೀತನಾಗಿ, ಭೀಷ್ಮನನ್ನು ಕುರಿತು "ಎಲೈ ತಾತನೇ, ನನ್ನ ಯಜ್ಞಕರ್ಮವು ಪೂರ್ಣಾಹುತಿಯಾಗುವಂತೆ ಯಾವ ರೀತಿಯಲ್ಲಿ ಇವರ ಕೋಪವನ್ನು ಸಮಾಧಾನಮಾಡಲಿ." ಎಂದು ಕೇಳಲು; "ನೀನು ಯಾತಕ್ಕೆ ಈ ಬಡ ಅರಸುಗಳಿಗೆ ಹೆದರುತ್ತೀಯೆ? ಇವುಗಳನ್ನು ಅಟ್ಟುವದಕ್ಕೆ ಬಣ್ಣದ ಕೋಲು ಬೇಕೆ? ನಾಯಿಗಳು ಸಿಂಹವನ್ನು ಕೊಲ್ಲುವದೆಂದಾದರೂ ಉಂಟೋ! ಈ ಅವಿವೇಕಿಶಿಖಾಮಣಿಯಾದ ಶಿಶುಪಾಲನು ಇಲ್ಲಿನ ರಾಜರುಗಳೊಡನೆ ಯಮಲೋಕಯಾತ್ರೆಗೆ ಪ್ರಯಾಣೋದ್ಯುಕ್ತನಾಗಿ ಇರುವನು. ಇಲ್ಲಿ ಇರುವ ಭೂಪತಿಗಳಿಗೂ ಇವನಂತೆಯೇ ಮರುಳು ಹಿಡಿದಿರುವದು. ಮಾಧವನೇ ಲೋಕಗಳಿಗೆಲ್ಲಾ ಸೃಷ್ಟಿ ಸ್ಥಿತಿ ಸಂಹಾರಕನಾಗಿ

ರುವನು. ಶಿಶುವಾಗಿರುವಾಗಲೇ ಪೂತನಿ, ಬಕ, ಶಕಟ, ಧೇನುಕಾದಿ ರಾಕ್ಷಸರನ್ನು ಕೊಂದನು. ಅವನೇ ದುಷ್ಟಶಿಕ್ಷಣೆಗೂ, ಶಿಷ್ಟರಕ್ಷಣೆಗೂ, ಧರ್ಮಸಂಸ್ಥಾಪನೆಗೂ ಜನಿಸಿರುವನು. " ಎಂದು ಭೀಷ್ಮನು ನುಡಿದನು.

ಅದನ್ನು ಕೇಳಿದ ಶಿಶುಪಾಲನಿಗೆ ಕೋಪವು ನೂರು ಪಾಲಾಗಿ ಹೆಚ್ಚಲು; " ಎಲಾ, ಮುದಿ ಗೂಗೆಯೇ, ಈ ರೀತಿ ಸುಳ್ಳುಗಳನ್ನು ಬೊಗಳಿ, ಈ ದೊರೆಗಳನ್ನು ಅಂಜಿಸುವದಕ್ಕೆ ನಿನಗೆ ನಾಚಿಕೆಯೂ ಇಲ್ಲವೇ? ನೀನು ಕುರುಗಳಲ್ಲಿ ಮುಖಂಡನಾದದ್ದಕ್ಕೂ, ಬ್ರಹ್ಮಚರ್ಯಾಶ್ರಮವನ್ನು ವಹಿಸಿದ್ದಕ್ಕೂ ಈಗಲೀಗ ಸಾರ್ಥಕವಾಯಿತು! ' ಶತಾಂಧಾಃ ಕೂಪಂ ಪ್ರವಿಶಂತಿ.' ಎಂಬ ಲೋಕವಾರ್ತೆಯು ನಿನ್ನ ಹಿಂಬಾಲಕರಾದ ಪಾಂಡವರಲ್ಲಿ ತಾರ್ಕಣೆಗೆ ಬಂತು. ಪೂತನಾದಿಗಳನ್ನು ಸಂಹರಿಸಿದನೆಂದು ಇವನ ಪರಾಕ್ರಮವನ್ನು ನೀನು ಸಾರಿದ್ದು ನಮ್ಮ ಮನಸ್ಸಿಗೆ ಬಹಳ ನೋವನ್ನುಂಟುಮಾಡಿತು! ಹಿಂದುಮುಂದರಿಯದೆ ಈ ಕೇಶವನನ್ನು ಕೈವಾರಿಸುವ ನಿನ್ನ ನಾಲಗೆಯು ಯಾತಕ್ಕೆ ಶತಚ್ಛಿದ್ರವಾಗಿ ಬಿದ್ದುಹೋಗುವದಿಲ್ಲ? ಹಳ್ಳಿಯ ಹುಡುಗರೆಲ್ಲಾ ಅಣಕಿಸುವ ಈ ಗೊಲ್ಲನನ್ನು ಏನೆಂದು ಹೊಗಳುತ್ತೀಯೆ! ಇವನು ಸಣ್ಣ ಹುಡುಗನಾಗಿದ್ದಾಗ ಒಂದು ನೀರುಕೋಳಿಯನ್ನು ಕೊಂದಮಾತ್ರಕ್ಕೆ ಮಹಾಶೂರನಾಗಿಬಿಟ್ಟನೋ? ಇವನು ಒಂದು ಹಳೆಯ ಗಾಡಿಯನ್ನು ಒದ್ದು ಕೆಡಹಿದ ಮಾತ್ರಕ್ಕೆ ಬಲಶಾಲಿಯಾದನೋ? ಗೋವರ್ಧನವೆಂಬ ಗೆದ್ದಲು ಗೂಡನ್ನು ಹೊತ್ತಷ್ಟಕ್ಕೆ ವೀರಾಗ್ರೇಸರನಾಗಿ ಹೋದನೋ? ಬೆಟ್ಟದಮೇಲೆ ಆಡುತ್ತಾ ಆಡುತ್ತಾ ಬೆಟ್ಟದಷ್ಟು ಕೂಳು ತಿಂದನೆಂದು ಹೊಗಳಿದೆಯಲ್ಲ! ಇವನು ಉಂಡದ್ದನ್ನು ಕೇಳಿ, ಎಲ್ಲರೂ ಬೆರಗಾದ ಹಾಗಿದೆ! ನೀನು ಮಹಾನೀತಿಜ್ಞನಲ್ಲಾ, ಇವನು ಉಂಡ ಕಂಸನ ಮನೆಗೆ ಎರಡು ಬಗೆದು ಅವನನ್ನು ಕೊಂದನಲ್ಲಾ, ಇದು ಎಲ್ಲಕ್ಕಿಂತಲೂ ಹೆಚ್ಚಲ್ಲವೆ? ನಿನ್ನ ಪ್ರಾಜ್ಞತೆಯನ್ನು ಸುಡಬೇಕು. ನಿನಗೆ ಯಾತಕ್ಕೋ ಧರ್ಮಜ್ಞಾನ? ನಿನಗೆ ನಾನು ಉಪದೇಶಮಾಡುತ್ತೇನೆ, ಬೇಕಾದರೆ ಕೇಳು. ಹೆಂಗಸರ ಮೇಲೆಯೂ, ಹಸುಗಳ ಮೇಲೆಯೂ, ಬ್ರಾಹ್ಮಣರ ಮೇಲೆಯೂ, ಒಂದುವೇಳೆ ಅನ್ನವಿಕ್ಕಿದವರ ಮೇಲೆಯೂ, ತಂಗುವದಕ್ಕೆ ಸ್ಥಳ ಕೊಟ್ಟವರ ಮೇಲೆಯೂ ಕೈಮಾಡಬಾರದೆಂ

ದು ಹಿರಿಯರು ಹೇಳುತ್ತಾರೆ. ಆದರೆ ಈ ಧರ್ಮ ಕೃಷ್ಣನಿಗೆ ಮುಟ್ಟಿಗಿಲ್ಲ. ನೀನು ಕೇಶವನ ಹೊಗಳುಭಟ್ಟುವಾಗಿ ಏನೇನೋ ಬೊಗಳುತ್ತೀಯೆ. ನಾನೇನು ಇವನ ಪೂರ್ವೋತ್ತರವನ್ನು ಅರಿಯೆನೆ? ಇವನು ಹೆಂಗೊಲೆಗೆ ಹೇಸಿದನೇ, ಗೋವಧೆಗೆ ಹಿಂದೆಗೆದನೇ? ಇವನಿಗೆ ಪೂಜೆಮಾಡಿಸಿದ ನಿನ್ನ ಜ್ಞಾನಕ್ಕೆ ಏನುತಾನೆ ಹೇಳಬಹುದು? ವಿವೇಕಿಗಳಲ್ಲಿ ಇವನೇ ಅಗ್ರೇಸರನು, ಇವನೇ ಪ್ರಪಂಚಗಳಿಗೆಲ್ಲಾ ಅಧೀಶನೆಂಬದಾಗಿ ಹೊಗಳುವ ನಿನ್ನ ಮಾತುಗಳನ್ನು ನಿಜವೆಂದು ನಂಬಿ, ಈ ಕೃಷ್ಣನು ಹಿಗ್ಗಿಹೋಗಿಬಿಟ್ಟಿದಾನೆ. ಹೀಗೆ ಬೊಂಕುವ ನಿನ್ನ ನಡತೆಗೆ ಏನು ಮಾಡಿದರೆ ತಾನೆ ತೀರೀತು? ನಿನ್ನ ಟೊಳ್ಳು ಹೊಗಳಿಕೆಯಲ್ಲಾ ಸುಳ್ಳೆಂದು ಯಾರಿಗೆತಾನೆ ಗೊತ್ತಿಲ್ಲ? ನಿನ್ನಂಥಾ ಗುರುವನ್ನು ಹಿಂಬಾಲಿಸುವ ಈ ಪಾಂಡವರೂ ಇನ್ನೆಷ್ಟು ಧರ್ಮಾತ್ಮರೋ ತಿಳಿಯದು! ನಿನ್ನ ಧರ್ಮಜ್ಞತೆಯು ನಮಗೆ ಗೊತ್ತಾಗಿಯೇ ಇರುವದು. ಇತರನಲ್ಲಿ ಅನುರಕ್ತಳಾದ ಅಂಬೆಯನ್ನು ನೀನು ಹಿಡಿದು ತಂದಾಗಲೇ ನಮಗೆ ಚೆನ್ನಾಗಿ ಗೊತ್ತಾಯಿತು! ನಿನ್ನ ತಮ್ಮನೇ ವಾಸಿ. ಅವನೂ ನಿನಗಿಂತ ಯೋಗ್ಯ. ಅವಳನ್ನು ಮದುವೆಯಾಗದೆ ಬಿಟ್ಟುಕೊಟ್ಟನು. ನಿನ್ನ ತಮ್ಮನ ಹೆಂಡತಿಯ ಮಕ್ಕಳು ಯಾರು? ಅವರೆಲ್ಲರೂ ಧರ್ಮಮಾರ್ಗದಲ್ಲಿಯೇ ವಿಧವೆಯಾದವಳ ಹೊಟ್ಟೆಯಲ್ಲಿ ನಿನ್ನ ಅನುಮತಿಯಿಂದಲೇ ಹುಟ್ಟಿದವರಲ್ಲವೆ? ಇದು ಮಹಾಧರ್ಮ! ಈ ಧರ್ಮಪದ್ಧತಿಯನ್ನು ನಿಮ್ಮಂಥವರು ಮಾತ್ರ ಅನುಸರಿಸತಕ್ಕದ್ದು. ಈ ಧರ್ಮವನ್ನು ನಾವರಿಯೆವು. 'ಅಪುತ್ರಸ್ಯ ಗತಿರ್ನಾಸ್ತಿ' ಎಂಬುವದು ನಿನಗೂ ತಿಳಿದೇ ಇದೆಯಲ್ಲ. ನಿನ್ನ ಮುಂದಣ ಪರಿಣಾಮವೇನೋ ಚೆನ್ನಾಗಿ ನೋಡಿಕೊ. ನೀನು ಎಂದಾದರೂ ಹಂಸಕಥೆಯನ್ನು ಕೇಳಿದ್ದಂಟೋ? ಅದರಂತೆಯೇ ನಿನಗೂ ನಿನ್ನ ನಂಟರ ಕೈಯಲ್ಲೇ ಮರಣ. ಆ ಕಥೆಯನ್ನಾದರೂ ಕೇಳಿ ವಿವೇಕಿಯಾಗು. ಪೂರ್ವದಲ್ಲಿ ಒಂದು ಮುದಿಹಂಸವು ಪಕ್ಷಿಗಳನ್ನೆಲ್ಲಾ ನೋಡಿ, 'ನೀತಿ ಮಾರ್ಗವನ್ನವಲಂಬಿಸಿರಿ; ಪಾಪಮಾರ್ಗವನ್ನು ತ್ಯಜಿಸಿರಿ.' ಎಂಬದಾಗಿ ಧರ್ಮೋಪದೇಶವನ್ನು ಮಾಡುತ್ತಿತ್ತು. ಕಪಟವನ್ನರಿಯದೆ ಮಿಕ್ಕ ಪಕ್ಷಿಗಳೆಲ್ಲಾ ತಮ್ಮ ತತ್ತಿಗಳನ್ನು ಅದರ ಬಳಿಯಲ್ಲಿಟ್ಟು ಅದಕ್ಕೆ ಬೇಕಾದ ಆಹಾರವನ್ನು ತಂದು ಕೊಡುತ್ತಿದ್ದವು. ಆ ಮುದಿ ಹಕ್ಕಿಯು ಆ ತತ್ತಿಗಳ

ನ್ನೆಲ್ಲಾ ತಿನ್ನಲಾರಂಭಿಸಿತು. ಈ ಸಂಗತಿಯು ಪಕ್ಷಿಗಳಿಗೆಲ್ಲಾ ತಿಳಿಯುಬರಲು, ಅವುಗಳು ಅದನ್ನು ಕೊಂದುಹಾಕಿದವಂತೆ. ಈ ಕಥೆಯತತ್ವವನ್ನು ಚೆನ್ನಾಗಿ ತಿಳಿ. ಇನ್ನು ಮೇಲಾದರೂ ವಿವೇಕಿಯಾಗು. ಗೊಲ್ಲರಮೇಲೆ ಕೈಮಾಡುವ ದಿಲ್ಲವೆಂದು ಕೃಷ್ಣನೊಡನೆ ಯುದ್ಧಮಾಡದೆ ನಿಂತನಲ್ಲ ಜರಾಸಂಧ; ಅವನೀಗ ದೊಡ್ಡವನು. ಕೃಷ್ಣನೂ, ಅರ್ಜುನನೂ, ಭೀಮಸೇನನೂ ವೇಷವನ್ನು ಮರಸಿ ಕೊಂಡು ಹೋಗಿ, ಹಿಂಬಾಗಲಿಂದ ಅವನ ಮನೆಯನ್ನು ಹೊಕ್ಕು, ಅವನು ಕೊಟ್ಟ ಅರ್ಘ್ಯವನ್ನು ತೆಗೆದುಕೊಳ್ಳದೆ, ತಮ್ಮ ಕಪಟವೇಷವನ್ನು ತೋರಿಸಿದರಲ್ಲ, ಇದೀಗ ಸತ್ಪುರುಷರ ಚರ್ಯ! ನೀನಿವರಿಗೆ ಧರ್ಮಪ್ರದರ್ಶಕನಾಗಿರುವಾಗ, ಇದೊಂದಾಶ್ಚರ್ಯಕರವಾದ ಕೆಲಸವಲ್ಲ." ಎಂದು ಶಿಶುಪಾಲನು ಭೀಷ್ಮನನ್ನು ಧಿಕ್ಕರಿಸಿದನು.

ಈ ರೀತಿಯಾದ ಶಿಶುಪಾಲನ ಕಠಿನೋಕ್ತಿಗಳನ್ನು ಕೇಳಿ, ಭೀಮಸೇನನಿಗೆ ಕೋಪವುಂಟಾಯಿತು. ಸ್ವಭಾವವಾಗಿ ವಿಶಾಲವಾದ ನೇತ್ರಗಳು ಮತ್ತಷ್ಟು ವಿಶಾಲವಾಗಿ, ತಾಮ್ರಚ್ಛಾಯೆಯನ್ನಂಗೀಕರಿಸಿದವು. ಹುಬ್ಬುಗಳು ಗಂಟಿಡಲಾರಂಭಿಸಿದವು. ಹಲ್ಲುಗಳು ನರನರನೆ ಶಬ್ದಮಾಡಲಾರಂಭಿಸಿದವು. ಕೂಡಲೆ ಅವನು ಸಿಂಹಾಸನದಿಂದ ಸಿಡಿಲ ಮರಿಯಂತೆ ನೆಗೆದನು. ಹಾಗೆ ನೆಗೆದ ಭೀಮಸೇನನನ್ನು ಹಿಡಿದು ನಿಲ್ಲಿಸಿ, ಭೀಷ್ಮನು ಸಾಂತ್ವವಚನಗಳಿಂದ ಸಮಾಧಾನಗೊಳಿಸುತ್ತಿದ್ದನು. ಗುರುವಾಕ್ಯೋಲ್ಲಂಘನೆಮಾಡಲಂಜಿ, ಭೀಮಸೇನನು ಕೋಪವನ್ನು ಅಡಗಿಸುತ್ತಿದ್ದನು. ಇದನ್ನೆಲ್ಲಾ ನೋಡುತ್ತಿದ್ದಾಗ್ಯೂ ಸ್ವಭಾವಧೀರನಾದ ಶಿಶುಪಾಲನು ಸ್ವಲ್ಪವಾದರೂ ಭಯಪಡಲಿಲ್ಲ. ವೃಕೋದರನನ್ನು ನರಿಗಿಂತಲೂ ಕಡೆಯಾಗಿ ಭಾವಿಸಿ, ಭೀಷ್ಮನನ್ನು ಕುರಿತು "ಅವನನ್ನು ಯಾತಕ್ಕೆ ತಡೆಯುತ್ತೀಯೆ? ಬಿಡು. ಇಲ್ಲಿ ನೆರೆದ ಅರಸುಗಳೆಲ್ಲಾ ನನ್ನ ಪರಾಕ್ರಮವಹ್ನಿಯಲ್ಲಿ ಅವನ ಶಲಭತ್ವವನ್ನು ನೋಡಲಿ!" ಎಂದು ನಗುತ್ತಾ, ಕೂಗಿ ಹೇಳಿದನು. ಅದನ್ನು ಕೇಳಿ ಭೀಮಸೇನನು ಕೋಪಾಂಧನಾಗಿ, ಮುಂದೆ ನುಗ್ಗುವದಕ್ಕೆ ಪ್ರಯತ್ನಮಾಡಲು; ಭೀಷ್ಮನಿಂತೆಂದನು:—

"ಎಲೈ ವೃಕೋದರನೇ, ಕೇಳು. ಶಿಶುಪಾಲನು ಚೇದಿವಂಶದಲ್ಲಿ ಹುಟ್ಟಿದನು. ಇವನು ಹುಟ್ಟಿದ ಕಾಲದಲ್ಲಿ ಇವನಿಗೆ ನಾಲ್ಕು ತೋಳುಗಳೂ,

ಮೂರು ಕಣ್ಣುಗಳೂ ಇದ್ದವು. ಇವನು ಹುಟ್ಟಿದ ಕೂಡಲೆ ಕತ್ತೆಯಹಾಗೆ ಕಿರಚಿಕೊಂಡನು. ಇವನ ಮಾತಾಪಿತೃಗಳು ಈ ವಿಪರೀತಗಳನ್ನು ನೋಡಿ ಭಯಪಟ್ಟು, ಇವನನ್ನು ತ್ಯಜಿಸಬೇಕೆಂದಿದ್ದಾಗ, 'ಎಲೈ ರಾಜನೇ, ನೀನು ಈ ಮಗುವನ್ನು ಬಿಟ್ಟುಬಿಡಬೇಡ. ಇದು ಈಗ ಸಾಯುವದಿಲ್ಲ. ಇದನ್ನು ಕಾಪಾಡು. ಇದು ಪರಾಕ್ರಮಶಾಲಿಯಾದ ರಾಜನಾಗುವದು. ಇದನ್ನು ಕೊಲ್ಲುವವನು ಮತ್ತೊಂದು ಕಡೆಯಲ್ಲಿ ಜನಿಸಿದಾನೆ.' ಎಂಬದಾಗಿ ಒಂದು ಆಕಾಶವಾಣಿಯಾಯಿತು. ಈ ವಾಕ್ಯವನ್ನು ಕೇಳಿದ ಕೂಡಲೆ, ತಾಯಿಯು ಪುತ್ರವಾತ್ಸಲ್ಯದಿಂದ ಮರುಗಿ, ' ಈ ಮಗುವಿಗೆ ಯಾರಿಂದ ಮರಣವೋ ತಿಳಿಸಿಕೊಡಬೇಕು.' ಎಂದು ಪ್ರಾರ್ಥಿಸಿದಳು. ' ಯಾರು ಎತ್ತಿಕೊಂಡರೆ ಶಿಶುವಿನ ಹೆಚ್ಚು ತೋಳುಗಳು ಬಿದ್ದು, ಹೆಚ್ಚು ಕಣ್ಣು ಇಂಗಿ ಹೋಗುವದೋ, ಆತನೇ ಇದಕ್ಕೆ ಮಾರಕನು." ಎಂದು ಆಕಾಶವಾಣಿಯು ನುಡಿಯಿತು. ಅಂದು ಮೊದಲುಗೊಂಡು ಇವನ ತಂದೆಯು ಈ ಲೋಕವಿಚಿತ್ರವಾದ ಶಿಶುವನ್ನು ನೋಡುವದಕ್ಕಾಗಿ ತನ್ನ ರಾಜ್ಯಕ್ಕೆ ಬಂದ ರಾಜರುಗಳನ್ನೆಲ್ಲಾ ಸತ್ಕರಿಸಿ, ಯಾರ ತೊಡೆಯಲ್ಲಿ ಶಿಶುವನ್ನು ಇಟ್ಟಾಗ್ಯೂ ಆಕಾಶವಾಣಿಯ ಮಾತು ನಡೆಯಲಿಲ್ಲ. ಹೀಗಿರಲು ಒಂದಾನೊಂದು ಕಾಲದಲ್ಲಿ ಶ್ರೀಕೃಷ್ಣನು ಅಲ್ಲಿಗೆ ಹೋಗಿದ್ದಾಗ ಅವನ ತೊಡೆಯಮೇಲೆ ಇಟ್ಟಕೂಡಲೆ, ಅದರ ಹೆಚ್ಚು ತೋಳುಗಳೂ ಹೆಚ್ಚು ಕಣ್ಣೂ ಮರೆಯಾದವು. ಕೂಡಲೇ ಇವನ ತಾಯಿಯು ತನ್ನ ಮಗನನ್ನು ಕಾಪಾಡಬೇಕೆಂದು ಬಹುವಿಧವಾಗಿ ಸೋದರಳಿಯನನ್ನು ಬೇಡಿಕೊಂಡಳು. 'ನಿನಗೋಸ್ಕರ ನೂರು ತಪ್ಪುಗಳನ್ನು ಮನ್ನಿಸುವೆನು.' ಎಂಬದಾಗಿ ಮಾತುಕೊಟ್ಟು ಶ್ರೀಕೃಷ್ಣನು ತೆರಳಿದನು. ಇದನ್ನೆಲ್ಲಾ ಇವನು ಬೊಗುಳುವದರಿಂದಲೇ ಇವನಿಗೆ ಈಗ ಅವಸಾನಕಾಲವು ಪ್ರಾಪ್ತಿಸಿದಂತೆ ತೋರುವದು. ನೀನು ಸ್ವಲ್ಪ ಸಮಾಧಾನವಾಗಿರು. ಇವನು ಹರಿಯ ಅಂಶವು. ಹರಿಯು ತನ್ನ ಅಂಶವನ್ನು ಈಗತೆಗೆದುಕೊಳ್ಳುವದರಲ್ಲಿ ಯತ್ನಿಸಿರುವನು." ಎಂದು ಹೇಳುವ ಭೀಷ್ಮನ ನುಡಿಗಳನ್ನು ಕೇಳಿ, ಶಿಶುಪಾಲನು ಕ್ರೋಧಾಂಧನಾಗಿ ಹೇಳಲಾರಂಭಿಸಿದನು:—

" ಎಲಾ ಭೀಷ್ಮಾ, ನೀನು ಕೈವಾರಿಯಂತೆ ಆಸನದಿಂದ ಎದ್ದೆದ್ದು ಹೊಗಳಿದೆಯಲ್ಲಾ; ಕೇಶವನಿಗೆ ಅಷ್ಟು ಪರಾಕ್ರಮವೂ ಇರಲಿ, ಬಾಧೆಯಿಲ್ಲ. ಇತರರನ್ನು ಹೊಗಳುವದೇ ನಿನಗೆ ಜೀವನವಾದರೆ, ಕೃಷ್ಣನಿಗಿಂತಲೂ ಉತ್ತಮರಾದವರನ್ನು ಹೊಗಳಿ, ನಾಲಗೆಯ ತೀನೆಯನ್ನು ಯಾಕೆ ಕಳೆದುಕೊಳ್ಳಬಾರದು? ಬಾಹ್ಲೀಕಪತಿಯಾದ ದರದನಿಲ್ಲವೆ? ಇಂದ್ರಸಮಾನನಾದ ಕರ್ಣನಿಲ್ಲವೆ? ಚರಾಚರಜೀವಿಸಹಿತವಾದ ಈ ಪ್ರಪಂಚವನ್ನು ಒಂದೇ ಬಾಣದಲ್ಲಿ ಸಂಹರಿಸಬಲ್ಲ ದ್ರೋಣಾಶ್ವತ್ಥಾಮರಿಲ್ಲವೆ? ಇವರನ್ನು ಯಾತಕ್ಕೆ ಹೊಗಳಬಾರದು? ಜಯದ್ರಥ, ದುರ್ಯೋಧನ, ದುರ್ಮುಖ, ಕೃಪಾದಿ ವೀರರು ನಿನಗೆ ಯಾವ ಅಪಕಾರವನ್ನು ಮಾಡಿದರು? ಪಾಂಡ್ಯ, ಉತ್ತಮ, ಶ್ವೇತ, ಶಂಖಾದಿಗಳೆಲ್ಲಾ ಸಾಮಾನ್ಯರೇ? ಅವರನ್ನೆಲ್ಲಾ ಬಿಟ್ಟು ಹಸುಗಾಯುವ ಗೊಲ್ಲನನ್ನು ಹೊಗಳುವ ನಿನ್ನ ಗುಣಕ್ಕೆ ಯಾರುತಾನೆ ಮೆಚ್ಚುವರು? ಎಲೈ ಭೀಷ್ಮನೇ, ನೀನು ಈ ರಾಜರ ದಯೆಯಿಂದ ಬದುಕಿದ್ದೀಯೆ. ಇಲ್ಲದಿದ್ದರೆ ಈ ವೇಳೆಗೆ ನಿನ್ನ ಪಾಡೇನಾಗುತ್ತಿತ್ತೋ!" ಎಂದು ಹೇಳಿದನು.

"ಆಹಾ! ಅದಕ್ಕೇನು ಸಂಶಯ. ಆದರೆ ಈ ದೊರೆಗಳನ್ನು ಮಾತ್ರ ಹುಳುಕುಗವಡೆಗೂ ಸರಿಗಾಣುವದಿಲ್ಲ." ಎಂದು ಭೀಷ್ಮನು ನುಡಿದನು.

ಕೂಡಲೆ ರಾಜಲೋಕವೆಲ್ಲಾ ಕೋಪಗೊಂಡು, ಕೆಲವರು " ವೃದ್ಧನಾದ ಭೀಷ್ಮನನ್ನು ಕೊಂದು ಬಿಡಬೇಕು" ಎಂದೂ; ಮತ್ತೆ ಕೆಲವರು, " ಮರುಳುಹಿಡಿದ ಈ ಮುದಿಯನ ಮಾತಿನಿಂದೇನು?" ಎಂದೂ; ಮತ್ತೆ ಕೆಲವರು, " ಈ ಮುದಿಯನು ಬಹುಪಾಪಿಯು. ಇವನಿಗೆ ಗರ್ವವು ನೆತ್ತಿಗೇರಿರುವದು. ಇವನನ್ನು ಕಾಷ್ಠದಂತೆ ಬೆಂಕಿಯಲ್ಲಿ ಸುಟ್ಟುಬಿಡಿ." ಎಂದೂ ಮಾತನಾಡುತ್ತಿದ್ದರು.

ಈ ಕಲಕಲವನ್ನು ಕೇಳಿ ಭೀಷ್ಮನು " ಎಲೈ ರಾಜರುಗಳಿರಾ, ನನ್ನನ್ನು ಕ್ಷುದ್ರಮೃಗದಂತೆ ಕೊಂದರೂ ಸರಿಯೆ, ಕಾಷ್ಠದಂತೆ ಬೆಂಕಿಯಲ್ಲಿ ದಹಿಸಿದರೂ ಸರಿಯೆ,—ಇಗೋ! ಇಲ್ಲಿ ನೋಡಿ—ಹೀಗೆಯೇ ನಿಮ್ಮೆಲ್ಲರ ತಲೆಯ ಮೇಲೆಯೂ ನನ್ನ ಎಡಗಾಲನ್ನು ಮಡಗಿರುವೆನು." ಎಂದು ತನ್ನ ಎಡಗಾಲನ್ನು ಎತ್ತಿ ತೋರಿಸಿ, " ಇಗೋ, ನಮ್ಮಿಂದ ಪೂಜೆಯನ್ನು ಕೈಕೊಂಡ ಗೋವಿಂದನು ಇಲ್ಲಿರುವನು. ಸಾಯಬೇಕಾದವನು ಇವನೊಡನೆ ಯುದ್ಧಕ್ಕೆ ಬರಲಿ," ಎಂದನು.

ಶಿಶುಪಾಲನು ಮಹಾಕೋಪೋದ್ದೀಪ್ತನಾಗಿ, "ಈ ಗೊಲ್ಲನಿಂದಲ್ಲವೇ ಇಷ್ಟು ಅನರ್ಥವುಂಟಾಯಿತು. ಈ ನೀಚನನ್ನು ಸಂಹರಿಸಿದರೆ ಎಲ್ಲವೂ ಅಡಗಿ ಹೋಗುವದು. ಹಾಗೆ ಪರಾಕ್ರಮವಿದ್ದರೆ ತಾನೇ ಇದಿರಿಗೆ ಬಂದು ನಿಲ್ಲಲಿ." ಎಂದು ಕೂಗಿ ಯುದ್ಧಸನ್ನದ್ಧನಾಗಿ ನಿಂತನು.

ಕೂಡಲೇ ಶ್ರೀಕೃಷ್ಣನು ಎದ್ದುನಿಂತು "ಎಲೈ ರಾಜರುಗಳಿರಾ, ಕೇಳಿ. ಈ ನೀಚನು ನಮ್ಮ ಸಾತ್ವತವಂಶದಲ್ಲಿ ಹುಟ್ಟಿದವನಾದರೂ ನಮಗೆ ಕೇಡನ್ನು ಮಾಡುತ್ತಿರುವನು. ನನಗೆ ಇವನು ಸೋದರತ್ತೆಯ ಮಗನಾದರೂ, ನಾನು ಪ್ರಾಗ್ಜ್ಯೋತಿಷಪುರಕ್ಕೆ ಹೋಗಿದ್ದಾಗ ನಮ್ಮ ದ್ವಾರಕೆಯನ್ನು ಸುಟ್ಟನು. ರೈವತಕದಲ್ಲಿ ಭೋಜನು ಬೇಟೆಯಾಡುತ್ತಿದ್ದಾಗ, ಅವನ ಪರಿವಾರದ ಮೇಲೆ ಬಿದ್ದು ಅನೇಕರನ್ನು ಸೆರೆಹಿಡಿದುಕೊಂಡು ಹೋದನು. ನಮ್ಮ ತಂದೆಯ ಯಜ್ಞಾಶ್ವವನ್ನು ಕದ್ದು ಅಶ್ವಮೇಧಕ್ಕೆ ವಿಘ್ನಮಾಡಿದನು. ಅಕ್ರೂರನ ಧರ್ಮಪತ್ನಿಗೂ ವಿಶಾಲಾದೇಶದ ರಾಜಪುತ್ರಿಯಾದ ಭದ್ರಾದೇವಿಗೂ ಪಾತಿವ್ರತ್ಯಭಂಗವನ್ನು ಉಂಟುಮಾಡಿದನು. ಈ ತಪ್ಪುಗಳನ್ನೆಲ್ಲಾ ನಮ್ಮ ಅತ್ತೆಗೋಸ್ಕರ ಮನ್ನಿಸಿದೆನು. ಈ ವಿಷಯಗಳೆಲ್ಲಾ ನಿಮ್ಮೆಲ್ಲರ ಇದಿರಿಗೆ ಚರ್ಚೆಯಾದದ್ದು ಒಳ್ಳೆಯದಾಯಿತು." ಎಂದು ಹೇಳುತ್ತಿರುವಲ್ಲಿ; ಶಿಶುಪಾಲನು "ಎಲೋ ಗೊಲ್ಲ, ಏನೇನು ಬೊಗಳುತ್ತೀಯೊ? ನೀನು ಕ್ಷಮಿಸಿದರೆಷ್ಟು, ಬಿಟ್ಟರೆಷ್ಟು. ನಿನ್ನ ಸಿಟ್ಟು ನನಗೆ ಗಣ್ಯವೆ!" ಎಂದು ನುಡಿಯಲು; ಶ್ರೀಕೃಷ್ಣನು "ಇವನಿಗೆ ಅವಸಾನಕಾಲವು ಸಮೀಪಿಸುತ್ತಿರುವದು. ಇದೋ ಇವನ ತಾಯಿಗೆ ನಾನು ಹಿಂದೆ ವಾಗ್ದಾನ ಮಾಡಿದಂತೆ ಇವನ ನೂರುತಪ್ಪುಗಳನ್ನೂ ಮನ್ನಿಸಿದೆನು. ಇದೇ ಇವನಿಗೆ ಆಯುಸ್ಸಮಾಪ್ತಿ ಸಮಯವು." ಎಂದು ಹೇಳಿ, ಚಕ್ರಾಯುಧವನ್ನು ಸ್ಮರಿಸಿ, ಅದು ಬರಲು, ತೆಗೆದುಕೊಂಡು ಶಿಶುಪಾಲನ ಶಿರಶ್ಛೇದನವನ್ನು ಮಾಡಿಬಿಟ್ಟನು. ನೆರೆದಿದ್ದ ರಾಜರುಗಳೆಲ್ಲಾ ಭೀತರಾಗಿ ಏನೇನೂ ಆಡಲಾರದೆ ಇದ್ದಹಾಗೆಯೇ ಸ್ತಬ್ಧರಾಗಿದ್ದರು.

ಆಗ ಶಿಶುಪಾಲನ ಶರೀರದಿಂದ ಸೂರ್ಯಸಮಾನವಾದ ಒಂದು ತೇಜಸ್ಸು ಹೊರಟು, ಶ್ರೀಕೃಷ್ಣನಿಗೆ ನಮಸ್ಕರಿಸಿ, ಆತನ ಪಾದಕಮಲವನ್ನೇ ಸೇರಿಕೊಂಡಿತು. ಆಗ ಮೇಘವಿಲ್ಲದೆ ಮಳೆಯೂ, ಸಿಡಿಲೂ ಬಿದ್ದವು; ಭೂಮಿಯೂ ಚಲಿಸಿತು.

ಆಗ ರಾಜಮಂಡಲಿಯಲ್ಲಿ, ಕೆಲವರು ಕೈಯನ್ನು ಹಿಸಿಕಿಕೊಳ್ಳುತ್ತಲೂ, ಕೆಲವರು ಕೋಪದಿಂದ ತುಟಿಯನ್ನು ಕಚ್ಚಿಕೊಳ್ಳುತ್ತಾ ಶ್ರೀಕೃಷ್ಣನನ್ನು ದುರದುರನೆ ನೋಡುತ್ತಲೂ; ಮತ್ತೆಕೆಲವರು ಶ್ರೀಕೃಷ್ಣನ ಪರಾಕ್ರಮಕ್ಕೆ ಮೆಚ್ಚಿ, ತಮ್ಮ ತಮ್ಮ ಮನದಲ್ಲಿ ಹೊಗಳುತ್ತಲೂ, ಇದ್ದರು. ಮಹರ್ಷಿಗಳು ಸ್ತೋತ್ರವನ್ನು ಮಾಡುತ್ತಾ ಸಂತೋಷದೊಡನೆ ಶ್ರೀಕೃಷ್ಣನ ಬಳಿಯನ್ನು ಸೇರಿದರು.

ಆಬಳಿಕ ಧರ್ಮರಾಜನು ಭೀಮಸೇನನಿಂದ ಶಿಶುಪಾಲನಿಗೆ ಸಂಸ್ಕಾರವನ್ನು ಮಾಡಿಸಿ, ಶಿಶುಪಾಲನ ಮಗನಿಗೆ ಚೇದಿರಾಜ್ಯಾಧಿಪತ್ಯವನ್ನು ಕೊಟ್ಟನು. ಅನಂತರ ತಮ್ಮಂದಿರೊಡನೆ ಅವಭೃಥಸ್ನಾನವನ್ನು ಮಾಡಿಕೊಂಡು, ದೇಶದೇಶದ ಅರಸುಗಳಿಗೆಲ್ಲಾ ಸತ್ಕಾರವನ್ನು ಮಾಡಿ, ಅವರನ್ನು ಕಳುಹಿಸಿಕೊಟ್ಟನು. ದುರ್ಯೋಧನನೂ, ಶಕುನಿಯೂ, ಹೊರತಾಗಿ ಕೌರವರೆಲ್ಲರೂ ಹೊರಟುಹೋದರು. ಶ್ರೀಕೃಷ್ಣನೂ ಯಜ್ಞವನ್ನು ನಿರ್ವಿಘ್ನವಾಗಿ ನಡಿಸಿ ಪರಿವಾರದೊಡನೆ ದ್ವಾರಕೆಗೆ ಪಯಣಮಾಡಿದನು. ಬ್ರಾಹ್ಮಣೋತ್ತಮರೂ, ಋಷಿಗಳೂ ತೃಪ್ತರಾಗಿ ಪಾಂಡವರನ್ನು ಹರಸಿ ಹೊರಟುಹೋದರು. ಸಕಲ ಪ್ರಜೆಗಳೂ ಈ ಯಜ್ಞದಿಂದ ತೃಪ್ತರಾದರು.

## ೯. ಪಾಂಡವರು ಜೂದಾಡಿ ರಾಜ್ಯವನ್ನು ಕಳೆದುಕೊಂಡದ್ದು.

ಯಜ್ಞೋತ್ತಮವಾದ ರಾಜಸೂಯವು ಪೂರ್ಣಾಹುತಿಯಾದ ಸಮನಂತರದಲ್ಲಿ ವ್ಯಾಸಋಷಿಯು ಶಿಷ್ಯರುಗಳೊಡನೆ ಧರ್ಮರಾಜನ ಬಳಿಗೆ ಹೋಗಲು; ಆತನು ಪ್ರತ್ಯುತ್ಥಾನವನ್ನು ಮಾಡಿ, ಸ್ವರ್ಣಮಯವಾದ ಆಸನವನ್ನಿತ್ತು, ಸತ್ಕರಿಸಿ, ಬಳಿಕ ತಾನೂ ಸಮುಚಿತಾಸನದಲ್ಲಿ ಕುಳಿತುಕೊಂಡನು.

ಆಮೇಲೆ ಧರ್ಮಪುತ್ರನನ್ನು ಕುರಿತು ಉಚಿತಜ್ಞನಾದ ಬಾದರಾಯಣನು:— "ಎಲೈ ಧರ್ಮನಂದನನೇ, ನಿನ್ನ ಭಾಗ್ಯವು ಕ್ಷಣಕ್ಷಣದಲ್ಲಿಯೂ ಅಭಿವೃದ್ಧಿಯನ್ನು ಹೊಂದುತ್ತಿರುವದು. ದುರವಾಪವಾದ ಏಕಚ್ಛತ್ರಾಧಿಪತ್ಯವನ್ನು ಹೊಂದಿರುವೆ. ನಿನ್ನಿಂದಲೇ ಕೌರವರೆಲ್ಲರಿಗೂ ಕ್ಷೇಮವುಂಟಾಯಿತು. ನಾನು ನಿನ

ಸತ್ಕಾರದಿಂದ ತೃಪ್ತನಾದೆನು. ನಿನ್ನ ಅನುಮತಿಯನ್ನು ಪಡೆದು ಸ್ವಸ್ಥಾನಕ್ಕೆ ಹೋಗಬೇಕೆಂದು ಇಲ್ಲಿಗೆ ಬಂದಿರುವೆನು." ಎಂಬದಾಗಿ ಹೇಳಿದನು.

"ಎಲೈ ಪುರುಷೋತ್ತಮನೆ, ರಾಜಸೂಯವಾದ ಕೂಡಲೆ ಮೂರು ಅದ್ಭುತವ್ಯಾಪಾರಗಳು ನಡೆಯುವವೆಂಬದಾಗಿ ನಾರದಮುನೀಶ್ವರನು ಹೇಳಿದನು. ಈ ಅದ್ಭುತಗಳೆಲ್ಲಾ ಶಿಶುಪಾಲನ ವಧೆಯಲ್ಲಿ ಮುಗಿದು ಹೋದವೋ ಹ್ಯಾಗೆ?" ಎಂದು ಯಮನಂದನನು ವ್ಯಾಸಮುನಿಯನ್ನು ಕೇಳಿದನು.

"ಎಲೈ, ನಿನಗಾಗಿಯೂ ದುರ್ಯೋಧನನ ದುಷ್ಟವ್ಯಾಪಾರಕ್ಕಾಗಿಯೂ ಹದಿಮೂರು ವರ್ಷಗಳೊಳಗಾಗಿ ಕ್ಷತ್ರಿಯಕುಲವೆಲ್ಲಾ ಭೀಮಾರ್ಜುನರ ಪರಾಕ್ರಮದಿಂದ ಬೆಂದು ಹೋಗುವದು. ಈ ರಾತ್ರಿಯಲ್ಲಿ ನರಕಪಾಲವನ್ನಾಂತು, ವೃಷಭಾರೂಢನಾಗಿ, ಭಸ್ಮಾಲಂಕೃತನಾದ ಮಹೇಶ್ವರನು ದಕ್ಷಿಣದಿಗಭಿಮುಖನಾಗಿ ಪ್ರಯಾಣಮಾಡುವಂತೆ ನಿನಗೆ ಸ್ವಪ್ನವಾಗುವದು. ನೀನು ಅದಕ್ಕಾಗಿ ವ್ಯಾಕುಲಪಡಬೇಡ. ಕಾಲವ್ಯಾಪಾರವನ್ನು ಯಾರುತಾನೆ ಮೀರಬಲ್ಲರು? ನಿನಗೆ ಶುಭವಾಗಲಿ. ನಾನು ಕೈಲಾಸಕ್ಕೆ ಹೋಗುತ್ತೇನೆ. ನೀನು ಜಾಗರೂಕನಾಗಿ ನ್ಯಾಯಮಾರ್ಗವನ್ನತಿಕ್ರಮಿಸದೆ ರಾಜ್ಯಭಾರವನ್ನು ಮಾಡು." ಎಂಬದಾಗಿ ಹೇಳಿ, ಶಿಷ್ಯರೊಡನೆ ಕೈಲಾಸಕ್ಕೆ ತೆರಳಿದನು.

ಇತ್ತ ಧರ್ಮನಂದನನು "ಋಷಿವಾಕ್ಯವು ಸಟೆಯಾಗಲಾರದು. ನನಗೋಸ್ಕರ ಎಲ್ಲರೂ ಮೃತ್ಯುವಶರಾಗುವರು. ಇದಕ್ಕೆ ಯಾವ ಪ್ರತೀಕಾರವೂ ಇಲ್ಲವೆಂದು ಚಿಂತಾಕ್ರಾಂತನಾಗಿ, ತನ್ನ ಸಹೋದರರನ್ನೆಲ್ಲಾ ಕರೆದು, ತನ್ನ ಸಮೀಪದಲ್ಲಿ ಕುಳ್ಳಿರಿಸಿಕೊಂಡು, "ಎಲೈ ಮಕ್ಕಳಿರಾ, ನನಗೋಸ್ಕರವಾಗಿ ಅರಸುಮಕ್ಕಳೆಲ್ಲಾ ಮಡಿದುಹೋಗುವರೆಂದು ಋಷಿಯು ಹೇಳಿದನು. ಆದುದರಿಂದಲೇ ಈ ಸರ್ವಕಂಟಕವಾದ ನನ್ನ ದೇಹವನ್ನು ತೊರೆದು ಬಿಡಬೇಕೆಂದು ನನಗೆ ಅಭಿಪ್ರಾಯವುಂಟಾಗಿರುವದು. ಈ ಅರ್ಥದಲ್ಲಿ ನಿಮ್ಮ ಅಭಿಪ್ರಾಯವೇನು, ಹೇಳಿ." ಎಂದು ತಮ್ಮಂದಿರನ್ನು ಕೇಳಿದನು.

ಅದಕ್ಕೆ ಅರ್ಜುನನು "ಯಾವದಕ್ಕೂ ಅಂಜದೆ ಸಮುಚಿತವಾದದ್ದನ್ನು ಮಾಡುವದೇ ಯೋಗ್ಯವು." ಎಂದನು.

ಅದನ್ನು ಕೇಳಿ ಧರ್ಮಜನು "ಇಗೋ ನನ್ನ ಪ್ರತಿಜ್ಞೆಯನ್ನು ಕೇಳಿ. ಇದು ಮೊದಲುಗೊಂಡು ನಾನು ಯಾರಲ್ಲಿಯೂ ನಿಷ್ಠುರೋಕ್ತಿಗಳನ್ನಾಡದೆ, ಬಂಧು ಜನಗಳ ಅಧೀನದಲ್ಲಿದ್ದುಕೊಂಡು, ಸರ್ವರನ್ನು ಸಮವಾಗಿ ಕಾಣುತ್ತಾ, ಧರ್ಮಾಚರಣೆಯಿಂದಲೇ ಕಾಲವನ್ನು ನೂಕಿ, ಅಪಖ್ಯಾತಿಗೆ ಅವಕಾಶವಿಲ್ಲದಂತೆ ನಡೆಯುವೆನು." ಎಂದನು.

ಆ ಮಾತಿಗೆ ತಮ್ಮಂದರೆಲ್ಲರೂ ಒಪ್ಪಿಕೊಂಡರು. ಈ ರೀತಿಯಲ್ಲಿ ಪ್ರತಿಜ್ಞೆಮಾಡಿ, ತನ್ನ ತಮ್ಮಂದಿರೊಡನೆ ತನ್ನ ಅರಮನೆಯನ್ನು ಪ್ರವೇಶಿಸಿದನು. ಶಕುನಿಯೂ, ದುರ್ಯೋಧನನೂ ರಾಜಗೃಹದಲ್ಲಿಯೇ ಇರುತ್ತಿದ್ದರು.

ಒಂದಾನೊಂದು ದಿವಸ, ಶಕುನಿಯೊಡನೆ ದುರ್ಯೋಧನನು ಆ ರಾಜಭವನದ ಸೌಭಾಗ್ಯವನ್ನು ನೋಡುವದಕ್ಕೋಸ್ಕರ ಹೊರಟು, ಒಂದು ಸ್ಫಟಿಕರಾಜ ಪ್ರದೇಶವನ್ನು ತಿಳಿಗೊಳವೆಂದು ಭ್ರಮಿಸಿ, ಉಟ್ಟ ಬಟ್ಟೆಯನ್ನು ಮೇಲಕ್ಕೆ ಎತ್ತಿ ಹಿಡಿದುಕೊಂಡು, ಆ ಸ್ಥಳವನ್ನು ದಾಟಿಹೋದ ಬಳಿಕ, ತನ್ನ ತಪ್ಪನ್ನು ನೋಡಿ ತಾನೇ ನಾಚಿಕೊಂಡು, ಮನಸ್ಸಿನಲ್ಲಿ ಚಿಂತಿಸುತ್ತಾ, ಒಬ್ಬರಿಗೂ ಕಾಣದಂತೆ ಎಲ್ಲೆಲ್ಲಿಯೋ ಸುತ್ತುತ್ತಾ, ಆ ದಿವಸವನ್ನೆಲ್ಲಾ ಕಳೆದನು. ಕೆಲವು ದಿವಸಗಳಾದ ಬಳಿಕ ಒಂದಾನೊಂದು ದಿವಸ, ತಿಳಿನೀರಿನಿಂದ ತುಂಬಿ ಬಿಳಿಯ ತಾವರೆಯಿಂದ ಒಪ್ಪುತ್ತಿದ್ದ ತಂಗೊಳವನ್ನು ನೆಲವೆಂದು ಭ್ರಮಿಸಿ, ಅದರಲ್ಲಿ ಬಿದ್ದುಬಿಟ್ಟನು. ಮಹಾರಾಜನ ಅಪ್ಪಣೆಯಮೇರೆ ಸೇವಕರು ದುರ್ಯೋಧನನಿಗೆ ಬೇರೆ ದುಕೂಲಗಳನ್ನು ತಂದುಕೊಟ್ಟರು. ಅವನಿಗಾದ ಅವಸ್ಥೆಗೆ ಭೀಮಾರ್ಜುನರೂ ನಕುಲ ಸಹದೇವರೂ ಕೈಹೊಯ್ದು ನಗುತ್ತಿದ್ದರು. ಮನಸ್ಸಿನಲ್ಲಿ ಉಕ್ಕಿ ಬರುವ ಕೋಪವನ್ನು ಮೆಲ್ಲಗೆ ಅಡಗಿಸಿಕೊಂಡು, ಅವರನ್ನು ಕಣ್ಣೆತ್ತಿ ನೋಡದೆ ಹಿಂದಿರುಗಿ ದುರ್ಯೋಧನನು ಹೊರಟು ಹೋಗುವಲ್ಲಿ, ಒಂದು ಸ್ಫಟಿಕ ಶಿಲೆಯನ್ನು ನೀರೆಂದು ಭ್ರಮಿಸಿ, ಉಟ್ಟ ಬಟ್ಟೆಯ ಸೆರಗನ್ನು ಮೇಲಕ್ಕೆಯೆತ್ತಿದನು. ಅದನ್ನು ನೋಡಿ ಅವರು ಮತ್ತಷ್ಟು ಗಟ್ಟಿಯಾಗಿ ನಗುವದಕ್ಕೆ ಆರಂಭಿಸಿದರು. ದುರ್ಯೋಧನನು ಹೋಗುತ್ತಾ ಹೋಗುತ್ತಾ ಮುಚ್ಚಿದ್ದ ಕನ್ನಡಿಯ ಬಾಗಲನ್ನು ತೆರೆದಿರುವದೆಂದು ಹೋಗಿ ತಲೆಯನ್ನು ತಾಕಿಸಿಕೊಂಡನು. ಮತ್ತೊಂದು ತೆರೆದ ಬಾಗಲನ್ನು

ಮುಚ್ಚಿರುವದೆಂದು ಯೋಚಿಸಿ, ತೆರೆಯಬೇಕೆಂದು ಕೈನೀಡಿ ಮುಂದಕ್ಕೆ ಮುಗ್ಗರಿಸಿ ಬಿದ್ದು ಬಿಟ್ಟನು. ಹೀಗೆ ನಿಮಿಷನಿಮಿಷಕ್ಕೂ ಆಗುತ್ತಿದ್ದ ಅವಮಾನವನ್ನು ಸಹಿಸಲಾರದೆ, ಜಾಗ್ರತೆಯಾಗಿ ಹಸ್ತಿನಾವತಿಗೆ ಪ್ರಯಾಣವನ್ನು ಬೆಳೆಯಿಸಿದನು.

ಮಾರ್ಗದಲ್ಲಿ ದುರ್ಯೋಧನನು ಪಾಂಡವರ ಐಶ್ವರ್ಯವನ್ನೂ ತನಗಾದ ಮಾನಭಂಗವನ್ನೂ ನೆನೆನೆನೆದು ಮನಸ್ಸಿನಲ್ಲಿ ಕೊರಗುತ್ತಾ, ಶಕುನಿಯೊಡನೆ ಒಂದು ಮಾತನ್ನೂ ಆಡದೆ, ಮೂಗುಹಿಡಿದವನಂತೆ ಹೋಗುತ್ತಿದ್ದನು.

ಶಕುನಿಯು ಹಾಗೆಯೇ ದುರ್ಯೋಧನನ ಅವಸ್ಥೆಯನ್ನು ನೋಡಿ, "ಸ್ವಭಾವವಾಗಿ ಸಲ್ಲಾಪಪ್ರಿಯನಾದ ಇವನು ಈ ರೀತಿಯಲ್ಲಿ ಮೌನವನ್ನು ಅವಲಂಬಿಸಿರುವನು. ಇದಕ್ಕೆ ಯಾವ ಕಾರಣವಿರಬಹುದು. ಪ್ರಾಯಶಃ ಜನಗಳು ತಮ್ಮ ಬಂಧುಗಳಲ್ಲಿ ಅತಿಥಿಸತ್ಕಾರವನ್ನು ಪಡೆದು ಹಿಂದಿರುಗುವಾಗ, ಅವರವರ ಗುಣಗಳನ್ನೂ ಅವರು ಮಾಡಿದ ಸತ್ಕಾರವನ್ನೂ ಹೇಳುವದು ಸ್ವಭಾವ. ಇಂಥಾ ಸಂದರ್ಭದಲ್ಲಿ ಇವನು ಮೂಕನಾಗಿರುವದು, ಆಶ್ಚರ್ಯ. ಒಂದು ವೇಳೆ ಪೂರ್ವದ ವೈರವನ್ನೇ ಇನ್ನೂ ಮನಸ್ಸಿನಲ್ಲಿಟ್ಟು ಅವರನ್ನು ಸ್ತೋತ್ರಮಾಡುವದಕ್ಕೆ ಇಷ್ಟವಿಲ್ಲದೆ ಈ ರೀತಿಯಲ್ಲಿರಬಹುದು. ಆದರೂ ಹೇಳತಕ್ಕ ನೂರಾರು ವಿಷಯಗಳುಂಟು. ಪ್ರಯಾಣಕಾಲದಲ್ಲಿ ಕಣ್ಣಿಗೆ ಕಾಣುವ ಪದಾರ್ಥಗಳ ವಿಷಯವಾಗೆಲ್ಲಾ ಎಷ್ಟೆಷ್ಟೋ ಹೇಳಬಹುದು. ಅದರಲ್ಲಿಯೂ ಸ್ವದೇಶಾಭಿಮುಖವಾಗಿ ಹೊರಡುವಾಗ ಮನುಷ್ಯನಿಗೆ ಸ್ವಭಾವವಾಗಿ ಒಂದು ಉಲ್ಲಾಸವುಂಟಾಗುವದು. ಈ ಸಂಗತಿಯೂ ಇವನಲ್ಲಿ ಕಾಣಬರಲಿಲ್ಲ. ಇವನು ಕೆನ್ನೆಯಲ್ಲಿ ಕೈಯಿಟ್ಟಿರುವದನ್ನೂ ಮಾತನಾಡದೆ ಸುಮ್ಮನೆ ಇರುವದನ್ನೂ, ಉಕ್ಕಿಬರುವ ನಿಟ್ಟುಸಿರನ್ನು ಬಹುಪ್ರಯತ್ನದಿಂದ ತಡೆಯುವದನ್ನೂ ನೋಡಿದರೆ, ಏನೋ ಒಂದು ವಿಧವಾದ ವ್ಯಾಕುಲವುಳ್ಳವನಹಾಗೆ ತೋರುತ್ತಾನೆ. ಕೇವಲ ವಿಶ್ವಾಸಪಾತ್ರನಾದ ನನ್ನಲ್ಲಿಯೂ ಈ ರೀತಿಯಲ್ಲಿ ಸಂಕೋಚಪಡುವದನ್ನು ನೋಡಿದರೆ, ಇದು ಪ್ರಬಲವಾದ ಚಿಂತೆಯೇ ಸರಿ. ಇದಕ್ಕೆ ಕಾರಣವನ್ನು ತಿಳಿದು ತಕ್ಕ ಪ್ರತೀಕಾರವನ್ನು ಮುಂದೆ ಯೋಚಿಸಬೇಕು. ಆದುದರಿಂದ ಇವನನ್ನು ಮಾತನಾಡಿಸಿ ಹೃದ್ಗತವನ್ನು ಅರಿಯುವೆನು." ಎಂದು ಯೋಚಿಸಿ, "ಅಪ್ಪಾ ದುರ್ಯೋಧನಾ, ನಿನ್ನ ರೀ

ತಿಯು ಎಂದಿನಂತಿರುವಹಾಗಿಲ್ಲ. ಏನೋ ವ್ಯತ್ಯಾಸವಿರುವಂತೆ ತೋರುತ್ತದೆ. ಅದಕ್ಕೆ ಕಾರಣವೇನು? ನನ್ನಲ್ಲಿ ಮರೆಯಿಸತಕ್ಕ ವಿಷಯವೇನೂ ಇಲ್ಲ." ಎಂದು ಹೇಳಿದನು.

ದುರ್ಯೋಧನನು ನಿಟ್ಟುಸಿರನ್ನು ಬಿಡುತ್ತಾ ಇಂತೆಂದನು:– "ಅರ್ಜುನನ ಪರಾಕ್ರಮದಿಂದ ಭೂಮಂಡಲವೆಲ್ಲವನ್ನೂ ವಶಮಾಡಿಕೊಂಡು, ಅತ್ಯುತ್ತಮವಾದ ಯಾಗವನ್ನು ನೆರವೇರಿಸಿ, ಕೀರ್ತಿಯನ್ನು ಪಡೆದ ಧರ್ಮರಾಜನನ್ನು ನೋಡಿನೋಡಿ ನನ್ನ ದುಃಖವು ಉಕ್ಕುತ್ತಿರುವದು. ಶಿಶುಪಾಲನನ್ನು ಸಭೆಯಲ್ಲಿ ಕೊಂದರೂಕೂಡ ಯಾರೂ ಆಕ್ಷೇಪಿಸಲಿಲ್ಲ. ಇದರಿಂದಲೇ ಅರಸರೆಲ್ಲರೂ ಅವರ ವಶರಾದರೆಂಬುವದು ವ್ಯಕ್ತವಾಯಿತು. ಹೀಗೆ ನಿಷ್ಕಂಟಕವಾಗಿ ಹೆಚ್ಚುತ್ತಿರುವ ಹಗೆಯ ಮೇಲ್ಮೆಯನ್ನು ನೋಡಿ ಯಾರಿಗೆ ತಾನೆ ಸೈರಿಸಲಾಗುವದು? ನಾನು ಕಿಚ್ಚನ್ನಾದರೂ ಹೊಗುವೆನು. ಇಲ್ಲವೇ ವಿಷವನ್ನಾದರೂ ಕುಡಿದು ಪ್ರಾಣಗಳನ್ನು ತೊರೆಯುವೆನು. ಸಮುದ್ರದಲ್ಲಿಯಾದರೂ ಬಿದ್ದು ಈ ಬೆಂದ ಒಡಲನ್ನು ನೀಗಿ ಕಳೆಯುವೆನು ನನಗೆ ಇನ್ನು ಜೀವದ ಮೇಲಣ ಆಸೆ ಇಲ್ಲ. ತನ್ನ ಶತ್ರುಗಳು ಅತ್ಯುಚ್ಛ್ರಾಯಸ್ಥಿತಿಯಲ್ಲಿರುವದನ್ನೂ ತಾನು ಮಹಾದೀನನಾಗಿ ಅವರನ್ನು ಓಲಗಿಸುವ ಸ್ಥಿತಿಯಲ್ಲಿ ಇರುವದನ್ನೂ ತಿಳಿದ ಯಾವ ನರಪಶುವಿಗೆ ತಾನೆ ಬದುಕುವ ಆಸೆಯುಂಟಾಗುವದು? ಈ ಮೆಯ್ಯ ಹೊರೆಯನ್ನು ಯಾತಕ್ಕೆ ಹೊತ್ತಿರಬೇಕು? ನಾನೊಬ್ಬನೇ ಆ ಸಂಪತ್ತನ್ನು ಗಳಿಸಲಾರೆನು. ಬೆಂಬಲಕ್ಕೆ ಬರುವ ಅರಸುಮಕ್ಕಳೇ ಇಲ್ಲ. ಆದಕಾರಣದಿಂದಲೇ ಈ ಹಾಳಾದ ದೇಹವನ್ನು ತ್ಯಜಿಸಿಬಿಡುತ್ತೇನೆ. ಈ ಪಾಂಡವರ ಬೇರನ್ನೇ ಕಿತ್ತುಬಿಡಬೇಕೆಂದು ನಾನೂ ನಾನಾಪ್ರಯತ್ನಗಳನ್ನು ಮಾಡಿದೆನು. ಅವರಿಗೆ ದೈವಬಲವಿದ್ದ ಪ್ರಯುಕ್ತ ನನ ಪ್ರಯತ್ನಗಳು ಯಾವವೂ ನೆರವೇರಲಿಲ್ಲ. ಅವರು ದಿನೇದಿನೇ ವೃದ್ಧಿಹೊಂದುವದನ್ನೂ, ನಾವುಗಳು ಕ್ಷೀಣದಶೆಗೆ ಬರುತ್ತಿರುವದನ್ನೂ ನೀನೇ ನೋಡು. ಅವರ ಭಾಗ್ಯವನ್ನೂ, ಅವರ ಮನೆಯಲ್ಲಿ ನನಗಾದ ಅವಮಾನವನ್ನೂ, ಅವರ ಊಳಿಗದವರು ನನ್ನನ್ನು ನೋಡಿ ನಕ್ಕದ್ದನ್ನೂ ನೆನೆದುಕೊಂಡರೆ ನನ್ನ ಹೃದಯವು ಬೆಂದುಹೋಗುವದು. ಇದಕ್ಕಿಂತಲೂ ದುಃಖಕ್ಕೆ ಇನ್ನೇನು ಕಾರಣಬೇಕು? ನಿನ್ನೊಡನೆ

ಯೂ ಹೇಳದೆ ಇನ್ನು ಯಾರಲ್ಲಿ ಈ ದುಃಖವನ್ನು ಹೇಳಿಕೊಳ್ಳಲಿ. ನನಗೆ ದುಃಖವು ಅತ್ಯಲ್ಪಣವಾಗಿರುವದು. ಇದಕ್ಕೆ ಪ್ರತೀಕಾರವನ್ನು ಮಾಡದಿದ್ದರೆ, ನನ್ನ ಆಸೆಯು ನ್ನೇ ಬಿಟ್ಟುಬಿಡು. ಈ ಸಂಗತಿಗಳನ್ನೆಲ್ಲಾ ಧೃತರಾಷ್ಟ್ರನಿಗೆ ನೀನೇ ತಿಳಿಸು." ಎಂದನು.

"ಎಲೈ ದುರ್ಯೋಧನಾ, ಯುಧಿಷ್ಠಿರನ ಭಾಗ್ಯಕ್ಕೆ ನೀನು ಹೊಟ್ಟೆಗಿಚ್ಚು ಪಡುವದು ನಿನಗೆ ತಕ್ಕದ್ದಲ್ಲ. ಅವರವರ ಅದೃಷ್ಟಾನುಗುಣವಾದ ಫಲವನ್ನವ ರವರು ಅನುಭವಿಸುತ್ತಾರೆ. ನೀನು ಅವರನ್ನು ಕೊಂದು ಹಾಕಬೇಕೆಂದು ಚತುರೋಪಾಯಗಳನ್ನು ಮಾಡಿದೆಯೆಲ್ಲ; ನಿನ್ನ ಕೋರಿಕೆಯು ನೆರವೇರಿತೆ! ಬಿಡು ಬಿಡು. ನೀನು ಯಾಕೆ ಕರುಬಬೇಕು? ಅವರ ವಂಶಪಾರಂಪರ್ಯವಾಗಿ ಬಂದ ರಾಜ್ಯವನ್ನು ಅವರನುಭವಿಸುತ್ತಾರೆ. ದ್ರೌಪದಿಯು ಅವರಿಗೆ ಧರ್ಮಪತ್ನಿ ಯಾದಳು. ದ್ರುಪದನೂ ವಾಸುದೇವನೂ ಅವರಿಗೆ ಪರಮಸ್ನೇಹಿತರಾಗಿರು ವರು. ಇದಕ್ಕೆ ನೀನು ಯಾಕೆ ವ್ಯಸನಪಡಬೇಕು? ಅಗ್ನಿಯನ್ನು ಪೂಜಿಸಿ ಅರ್ಜುನನು ಗಾಂಡೀವವನ್ನು ಸಂಪಾದಿಸಿದರೆ ನಿನಗೇನು? ಅವನು ಎಲ್ಲರನ್ನೂ ಜಯಿಸಿದರೆ ನಿನಗೇನು ಸಂಕಟ? ತನಗೆ ಮಾಡಿದ ಉಪಕಾರವನ್ನು ನೆನೆದು ಮಯ ನು ಓಲಗದ ಚಾವಡಿಯನ್ನು ಕಟ್ಟಿಕೊಟ್ಟದ್ದರಿಂದ ನಿನಗೆ ಕೊರತೆಯಾದ್ದೇನು? ನಿನಗೆ ಬೇಕಾದವರು ಯಾರೂ ಇಲ್ಲವೆಂದು ಹೇಳಿದೆಯಲ್ಲ; ಇದೂ ಸುಳ್ಳು. ನಿನ್ನ ತಮ್ಮಂದಿರು ನೀನು ಇಟ್ಟ ಗೆರೆಮೀರದೆ ನಡೆಯುವದಿಲ್ಲವೆ? ನಿಮ್ಮ ದ್ರೋ ಣನ ಬಿಲ್ಲು ಮುರುಕು ಬಿಲ್ಲೇ, ಕರ್ಣನೇನು ಸಾಮಾನ್ಯನೆ, ಕೃಪನೇನು ಬಲ ಹೀನನೇ? ನಾನೂ ನನ್ನ ತಮ್ಮನೂ ಇಲ್ಲವೆ? ಸೌಮದತ್ತನು ನಿನ್ನ ಕಡೆಯವನ ಲ್ಲವೆ? ಇವರನ್ನೆಲ್ಲಾ ಸೇರಿಸಿಕೊಂಡು ನೀನು ಹೊರಟರೆ, ನಿನಗೆ ಈ ಭೂಮಿ ಯನ್ನು ಗೆಲ್ಲುವದೊಂದು ವಿಷಯವೆ?" ಎಂದನು.

"ಹಾಗಾದರೆ, ನೀನು ನನ್ನ ಸಹಾಯಕ್ಕೆ ನಿಂತರೆ, ನಾನು ಪಾಂಡವರನ್ನು ಬಡಿದು ಅಟ್ಟಿಬಿಡುತ್ತೇನೆ. ನಮಗೆ ಎಲ್ಲವೂ ಸೇರಿಬಿಡುವದು. ಅವರ ಸಭಾ ಮಂಟಪವೇ ನಮ್ಮದಾಗುವದು." ಎಂದನು.

"ಅಯ್ಯಾ, ಮರುಳೇ, ಕೇಳು. ಪಾಂಡವರು ಯುದ್ಧವೆಂದರೆ ತಾವೇ ಮುಂದಾಳಾಗಿ ಬಂದು ನಿಲ್ಲತಕ್ಕವರು. ಅವರನ್ನು ಗೆಲ್ಲುವದು ಅಸಾಧ್ಯ

ನಾನು ಒಂದು ಉಪಾಯವನ್ನು ಹೇಳುತ್ತೇನೆ. ನೀನು ಆ ರೀತಿ ಮಾಡು. ಧರ್ಮರಾಜನು ತಾನೇ ನಮ್ಮ ಕೈಗೆ ಬೀಳುವನು. ಕೇಳು. ಧರ್ಮರಾಜನಿಗೆ ಜೂಡಾಡುವದಂದರೆ, ಪ್ರಾಣ; ಆಡುವದು ಮಾತ್ರ ತಿಳಿಯದು. ನೀನು ಕೇಳಿದರೆ ಸಾಕು; ಆಡುವದಿಲ್ಲವೆನ್ನುವದಕ್ಕೆ ಅವಮಾನ. ಜೂದಾಡುವದರಲ್ಲಿ ನನಗೆ ಸಮಾನರಾದವರು ಈ ಪ್ರಪಂಚದಲ್ಲೇ ಇಲ್ಲ. ನೀನು ಧರ್ಮರಾಜನನ್ನು ಮೆಲ್ಲಗೆ ಒಪ್ಪಿಸಿ ಕರೆಯಕಳುಹು. ಮೇಲಿನ ಕೆಲಸವನ್ನು ನಾನೇ ನೋಡಿಕೊಳ್ಳುತ್ತೇನೆ. ನಿಮ್ಮ ತಂದೆ ನನಗೆ ಒಂದು ಮಾತನ್ನು ಹೇಳಿದರೆ ಸಾಕು. ಸುಮ್ಮನೆ ಇದಕ್ಕೆ ಯಾಕೆ ತಲೆಯಮೇಲೆ ಕೈಯಿಟ್ಟುಕೊಂಡು, ಕುಳಿತು ಇದ್ದೀಯೆ? ಈ ಸಂಗತಿಯನ್ನೆಲ್ಲಾ ನಿಮ್ಮ ತಂದೆಗೆ ತಿಳಿಸಿ ಅವನನ್ನು ಒಡಂಬಡಿಸು; ನಿನ್ನ ಕೆಲಸವಾಯಿತು." ಎಂದನು.

"ನೀನೇ ಇದನ್ನೆಲ್ಲಾ ಮಾಡಬೇಕು. ನನ್ನ ಮಾತನ್ನು ನಮ್ಮ ತಂದೆಯು ಎಷ್ಟುಮಾತ್ರವೂ ಕೇಳುವದಿಲ್ಲ." ಎಂದು ದುರ್ಯೋಧನನು ಕಣ್ಣಲ್ಲಿ ನೀರು ತಂದುಕೊಂಡನು.

ಶಕುನಿಯು ದುರ್ಯೋಧನನ ಮನೋಭಾವವನ್ನರಿತು ಅವನಿಗೆ ಹಿತವನ್ನು ಮಾಡಬೇಕೆಂದೆಣಿಸಿ ಮಹಾರಾಜನು ಏಕಾಕಿಯಾಗಿರುವ ಸಮಯವನ್ನರಿತು, ಅವನ ಬಳಿಗೆ ದುರ್ಯೋಧನನ್ನು ಕರೆದುಕೊಂಡು ಹೋಗಿ, "ಎಲೈ ಮಹಾರಾಜನೇ, ನಿನ್ನ ಹಿರಿಯಮಗನು ಮುಖದಲ್ಲಿ ಕಳೆ ತಪ್ಪಿ ದಿನೇ ದಿನೇ ಕಂಗೆಟ್ಟು ಹೋಗುತ್ತಾ ಇದಾನೆ. ಇದಕ್ಕೆ ಕಾರಣವೇನೋ ವಿಚಾರಿಸಿ, ತಕ್ಕ ಚಿಕಿತ್ಸೆಯನ್ನು ಮಾಡದೆ ಹೀಗೆ ಸುಮ್ಮನಿರುವರೆ!" ಎಂದನು.

ಧೃತರಾಷ್ಟ್ರನು ತನ್ನ ಮಗನನ್ನು ಕುರಿತು "ದುರ್ಯೋಧನಾ, ನಿನಗೆ ಏನಪ್ಪಾ ಚಿಂತೆ? ನನ್ನೊಂದಿಗೆ ಹೇಳಬಾರದೆ. ನೀನು ಕಂಗೆಟ್ಟು ಕಡ್ಡಿಯಾಗಿ ಹೋದೆಯಂತಲ್ಲಾ; ಶಕುನಿ ಹೇಳುತ್ತಾನಲ್ಲಾ; ಅದೇನು ಸಂಗತಿ? ನಿನಗೆ ಯಾವ ಕೊರತೆ? ನನ್ನ ಅಷ್ಟೈಶ್ವರ್ಯವೂ ನಿನ್ನ ಅಧೀನದಲ್ಲಿರುವದು. ನಿನ್ನ ತಮ್ಮಂದಿರು ನೀನು ಹೇಳಿದ ಮಾತಿಗೆ ಪ್ರತಿಯಾಡುವದಿಲ್ಲ. ಕಣ್ಣಿಗೆ ಬೇಕಾದ ಉಡುಪನ್ನು ಉಡುತ್ತೀಯೆ. ಬಾಯಿಗೆ ಬೇಕಾದ್ದನ್ನು ಸವಿಯುತ್ತೀಯೆ.

ನಮ್ಮ ಲಾಯದಲ್ಲಿ ಉತ್ತಮವಾದ ಕುದುರೆಗಳಿಗೇನಾದರೂ ಕೊರತೆಯೇ? ನೀನು ಕೃಶನಾಗುವದಕ್ಕೆ ಕಾರಣವೇನು? ನಿನಗೆ ಇಷ್ಟವಾದ ರಾಣಿವಾಸವಿಲ್ಲವೆ? ನೀನು ಒಂದು ಮಾತನಾಡಿದರೆ ಸಾಕು. ಯಾವದು ಬೇಕೋ ಅದು ಸಿದ್ಧವಾಗಿರುವದು. ಹೀಗಿರುವಲ್ಲಿ ಏನೂ ಇಲ್ಲದ ಬಡವನಂತೆ ನೀನು ಕೊರಗಿ ಹೋಗುವದಕ್ಕೆ ಕಾರಣವೇನು ? " ಎಂದು ಕೇಳಿದನು.

ಅದಕ್ಕೆ ದುರ್ಯೋಧನನು " ನನ್ನ ಉಡುಪು ಒಂದುಡುಪೇ, ನನ್ನ ಊಟ ಒಂದೂಟವೇ, ನನ್ನ ಬಾಳು ಒಂದು ಬಾಳೇ! ಯುಧಿಷ್ಠಿರನ ಭಾಗ್ಯವನ್ನೂ ವಿಭವವನ್ನೂ ನೋಡಿದರೆ, ನನಗೆ ಯಾವದುತಾನೇ ಬೇಕಾಗುವದು? ಅವನ ಭೋಗವೇ ನನ್ನನ್ನು ಕಾಂತಿಗುಂದಿಸುವದು. ಅವನ ಸಭಾಮಂಟಪವು ನನ್ನ ಕಣ್ಣಿನಲ್ಲೇ ನಟ್ಟಿರುವದು. ಅದರಿಂದಲೇ ನಾನು ಬಡವಾದೆನು. ಅವನ ಅರಮನೆಯಲ್ಲಿ ಪ್ರತಿನಿತ್ಯವೂ ಸಹಸ್ರ ಬ್ರಾಹ್ಮಣರು ಭೋಜನ ಮಾಡುವರು. ಇದೂ ಅಲ್ಲದೆ ಎಂಬತ್ತೆಂಟು ಸಾಸಿರಮಂದಿ ಸ್ನಾತಕರು ಅಲ್ಲಿಯೇ ವಾಸಮಾಡುತ್ತಿರುವರು. ಕೆಲವು ದಿವಸಗಳ ಹಿಂದೆ ಕಾಂಭೋಜರಾಜನು ನೂರಾರು ಕೃಷ್ಣಾಜಿನಗಳನ್ನೂ, ಸಾಸಿರಾರು ದುಕೂಲಗಳನ್ನೂ ಕೊಟ್ಟು ಕಳುಹಿದನು. ಅರಸುಮಕ್ಕಳು ಕಳುಹಿದ ಸಾಸಿರಾರು ಆನೆಗಳೂ ನೂರಾರು ಒಟ್ಟೆಗಳೂ ಅರಮನೆಯಲ್ಲಿ ಓಡಾಡುತ್ತಿವೆ. ಅವರಿವರು ತೆತ್ತ ಕಪ್ಪಗಳಿಗೆ ಗಣನೆಯೇ ಇಲ್ಲ. ಅಷ್ಟೊಂದು ಐಶ್ವರ್ಯವನ್ನು ನಾನು ನೋಡಿದ್ದೇ ಇಲ್ಲ. ಅದನ್ನೆಲ್ಲಾ ನೋಡಿ, ನಾನು ಹ್ಯಾಗೆ ಸಹಿಸಿಕೊಂಡಿರಲಿ? ಅವನ ಅರಮನೆಯ ಮುಂದೆ ಪೊಗದಿ ಕೊಡುವದಕ್ಕೆ ಬಂದು ನಿಂತಿದ್ದವರಿಗೆ ಒಳಗೆ ಪ್ರವೇಶಿಸುವದಕ್ಕೆ ಅವಕಾಶವೇ ದೊರೆಯುವದಿಲ್ಲ. ಎಷ್ಟು ಹೇಳಿ ಏನು ಫಲ? ಸಮುದ್ರನೇ ತನ್ನ ಅಮೃತವನ್ನು ತಂದುಕೊಟ್ಟನು. ನೂರಾರು ಸ್ವರ್ಣಕುಂಭಗಳಲ್ಲಿ ತಂದ ಸಮುದ್ರೋದಕವನ್ನು ದಿವ್ಯವಾದ ಶಂಖದಲ್ಲಿ ತುಂಬಿ ಕೃಷ್ಣನೇ ಧರ್ಮರಾಜನಿಗೆ ಅಭಿಷೇಕವನ್ನು ಮಾಡಿದನು. ಅಲ್ಲಿ ಬಂದಿದ್ದ ಅರಸರಿಗೆಲ್ಲಾ ಬ್ರಾಹ್ಮಣರ ಊಳಿಗ ಮಾಡುವದೇ ಕಾರ್ಯವಾಯಿತು. ಈ ಭಾಗ್ಯವು ಯಾವ ದಿಕ್ಪಾಲಕರಿಗೆತಾನೇ ಉಂಟು? ಇದನ್ನೆಲ್ಲಾ ನೋಡಿ, ಯಾರುತಾನೆ ಸಹಿಸುವರು?

ಯಾರಮನಸಸ್ಸು ತಾನೆ ನೆಮ್ಮದಿಯಾಗಿ ಇರುವದು?" ಎಂದು ಕಣ್ಣೀರು ಸುರಿದನು.

ಇದನ್ನೆಲ್ಲಾ ಕೇಳಿ ಶಕುನಿಯು "ಎಲೈ ದುರ್ಯೋಧನ, ಇವುಗಳೆಲ್ಲಾ ನಿನ್ನ ವಶವಾಗುವದಕ್ಕೆ ಒಂದು ಉಪಾಯವನ್ನು ಹೇಳುವೆನು ಕೇಳು. ನಾನು ಜೂದಾಡುವದರಲ್ಲಿ ಸಮರ್ಥನು. ಆಡುವದು ಬರದೇ ಇದ್ದಾಗ್ಯೂ ಯುಧಿಷ್ಠಿರನಿಗೆ ಆಟದಲ್ಲಿ ಅತ್ಯಾಸಕ್ತಿಯುಂಟು. ನೀನು ಅವನನ್ನು ಇಲ್ಲಿಗೆ ಕರೆತರಿಸು. ನಾನು ಎಲ್ಲವನ್ನು ನಿನಗೆ ಗೆದ್ದುಕೊಡುತ್ತೇನೆ. ಆ ಮೇಲೆ ನೀನೇ ಎಲ್ಲವನ್ನು ಸುಖವಾಗಿ ಅನುಭವಿಸುತ್ತಿರಬಹುದು." ಎಂದನು.

ದುರ್ಯೋಧನನು ತಂದೆಯನ್ನು ಕುರಿತು "ಅಪ್ಪಾಜಿ, ನೀನು ಸಮ್ಮತಿಸಿದರೆ, ಶಕುನಿಯು ಎಲ್ಲವನ್ನು ನನಗೆ ಜೂದಿನಲ್ಲಿ ಗೆದ್ದುಕೊಡುವನು. ನೀನು ಅಪ್ಪಣೆ ಕೊಡಬೇಕು." ಎಂದು ಬೇಡಿಕೊಂಡನು.

ಅದಕ್ಕೆ ಮಹಾರಾಜನು "ನಾನು ವಿದುರನನ್ನು ಕೇಳದೆ ಯಾವದನ್ನೂ ಮಾಡುವದಿಲ್ಲ. ಅವನು ಮುಂದಾಲೋಚನೆಯವನು. ನ್ಯಾಯವನ್ನು ಮೀರುವವನಲ್ಲ. ಅವನನ್ನು ಕೇಳಿ ಯಾವದನ್ನು ಮಾಡಬೇಕೋ ತಿಳಿಸುತ್ತೇನೆ." ಎಂಬದಾಗಿ ಹೇಳಿದನು.

"ನೀನು ವಿದುರನನ್ನು ಕೇಳಿದರೆ ಇದಕ್ಕೆ ಅವನು ಒಡಂಬಡುವದಿಲ್ಲ. ನೀನು ಇದನ್ನು ನಡೆಯಿಸಿಕೊಡದೆ ಇದ್ದರೆ ನಾನುಬೇರೆ ಪ್ರಾಣಗಳನ್ನು ಹೊತ್ತಿರಲಾರೆನು. ನಾನು ಸತ್ತುಹೋದಮೇಲೆ ನೀನೂ ವಿದುರನೂ ಸುಖವಾಗಿರಬಹುದು; ಈ ಪ್ರಪಂಚವನ್ನೆಲ್ಲಾ ಆಳಬಹುದು. ನನ್ನಿಂದಲೇನು?" ಎಂಬದಾಗಿ ಅತ್ತನು.

ಧೃತರಾಷ್ಟ್ರನು ಈ ದುಃಖವನ್ನು ನೋಡಲಾರದೆ, "ಸಹಸ್ರರತ್ನಸ್ತಂಭಗಳಿಂದಲೂ ನೂರಾರು ಬಾಗಿಲುಗಳಿಂದಲೂ ಪರಿರಂಜಿತವಾಗಿ, ಮನೋಹರವಾದ ಒಂದು ಮಂಟಪವನ್ನು ನಿರ್ಮಿಸುವಂತೆ ಶಿಲ್ಪಿಗಳಿಗೆ ಆಜ್ಞಾಪಿಸು." ಎಂಬದಾಗಿ ಅಪ್ಪಣೆ ಕೊಟ್ಟು, ವಿದುರನ ಬಳಿಗೆ ಆಳುಗಳನ್ನು ಅಟ್ಟಿದನು.

ವಿದುರನು ಈ ಸಮಾಚಾರವನ್ನು ಕೇಳಿದ ಕೂಡಲೆ "ಕಲಿಯು ಪ್ರಾಪ್ತವಾಯಿತು; ರಾಜಕ್ಷಯವು ಆರಂಭಿಸುವದು." ಎಂಬದಾಗಿ ನೆನೆದು, ಧೃತರಾ

ಷ್ಟ್ರನಲ್ಲಿಗೆ ಹೋಗಿ, ವಿನಯವಿನಮಿತ ಶಿರಸ್ಕನಾಗಿ "ಎಲೈ ಮಹಾರಾಜನೇ, ದ್ಯೂತಕ್ಕೆ ಅನುಮತಿಯನ್ನು ನೀನು ಕೊಟ್ಟದ್ದು ಯುಕ್ತವಾಗಿ ತೋರುವದಿಲ್ಲ. ನಿನ್ನ ಮಕ್ಕಳಲ್ಲಿ ಕಲಹವಿಲ್ಲದಂತೆ ನೋಡಿಕೊಳ್ಳತಕ್ಕದ್ದು ನಿನಗೆ ಸೇರಿದ್ದು." ಎಂದನು.

"ಓ ಕ್ಷತ್ತಾ, ದೈವಕ್ಕಿಂತಲೂ ದೊಡ್ಡದು ಯಾವದೂ ಇಲ್ಲ. ಈ ದ್ಯೂತದಿಂದ ಕಲಹವಾಗದಂತೆ ನಾವೆಲ್ಲರೂ ನಿಂತು ನೋಡಿಕೊಳ್ಳಬಹುದು. ಇದರಿಂದ ಏನಾದರೂ ಸರಿಯೆ; ನೀನು ಈ ದಿವಸವೇ ಹೊರಟು, ಖಾಂಡವಪ್ರಸ್ಥಕ್ಕೆ ಹೋಗಿ, ಯುಧಿಷ್ಠಿರನನ್ನು ಕರೆದುಕೊಂಡು ಬಾ." ಎಂದು ಹೇಳಿದನು.

ಇದನ್ನು ಕೇಳಿದ ಕೂಡಲೆ, "ಧೃತರಾಷ್ಟ್ರನ ವಂಶವು ಕ್ಷಯವಾಗುವದಕ್ಕೆ ಪ್ರಾರಂಭವಾಯಿತು." ಎಂದು ಚಿಂತಿಸುತ್ತಾ, ವಿದುರನು ಭೀಷ್ಮಾಚಾರ್ಯನ ಬಳಿಗೆ ಹೋದನು.

ಇತ್ತ ಧೃತರಾಷ್ಟ್ರನು ದುರ್ಯೋಧನನನ್ನು ಕರೆಯಿಸಿ, "ಎಲೈ ದುರ್ಯೋಧನಾ, ದ್ಯೂತದ ಮಾತನ್ನು ಬಿಡು. ವಿದುರನು ಅದಕ್ಕೆ ಅನುಮತಿಸುವದಿಲ್ಲ. ವಿದುರನ ಮಾತು ನನಗೂ ಸೂಕ್ತವಾಗಿ ತೋರುತ್ತದೆ. ನಾನೂ ನಿನಗೆ ಹಿತವನ್ನು ಬಯಸಿ ಹೇಳುತ್ತೇನಲ್ಲದೆ ಬೇರೆ ಇಲ್ಲ. ವೃಷ್ಣಿಗಳಲ್ಲಿ ಉದ್ಧವನು ಹ್ಯಾಗೋ, ನಮ್ಮಲ್ಲಿ ವಿದುರನು ಹಾಗೆ. ಅವನ ಮಾತನ್ನು ಉಲ್ಲಂಘಿಸಬೇಡ. ಜೂದಿನಿಂದ ಕಲಹವುಂಟಾಗುವದು ಸ್ವಭಾವ. ಕಲಹವಾದರೆ ರಾಜ್ಯವು ಹಾಳಾಗುವದು. ಆದ್ದರಿಂದ ಜೂದಿನ ಯೋಚನೆಯನ್ನು ಬಿಡು. ನಿನಗೆ ಈವಾಗ ಯಾವ ಕೊರತೆ ಉಂಟಾಗಿರುವದು. ನೀನು ಸಮಸ್ತಶಾಸ್ತ್ರದಲ್ಲಿಯೂ ಪರಿಶ್ರಮವುಳ್ಳವನಾಗಿದ್ದೀಯೆ. ಜ್ಯೇಷ್ಠಪುತ್ರನಾದ ನಿನಗೆ ಈ ಕಿರೀಟವು ದೊರೆಯುವದು. ಇಷ್ಟು ಐಶ್ವರ್ಯವನ್ನು ಭುಂಜಿಸುತ್ತಾ, ನೀನು ಚಿಂತಿಸುವದಕ್ಕೆ ಕಾರಣವೇನೋ ತೋರುವದಿಲ್ಲ. ನಿನ್ನ ದುಃಖಕ್ಕೆ ಮೂಲವೇನು ಹೇಳು." ಎಂದನು.

ದುರ್ಯೋಧನನು ನಿಟ್ಟುಸಿರನ್ನು ಬಿಡುತ್ತಾ ಇಂತೆಂದನು:—"ನನ್ನ ಚಿಂತೆಗೆ ಕಾರಣವೇನೆಂದು ಕೇಳುತ್ತೀಯೆ! ನಾನು ಯಾವ ಕಾರಣವನ್ನು ಹೇಳ

ಲಿ. ನಾನು ರಾಜಪುತ್ರನೇ ಸರಿ. ನನಗೂ ಬೇಕಾದ ಸಂಪತ್ತಿರುವದೂ ಸತ್ಯ. ನನಗೆ ಈ ಭಾಗ್ಯಗಳಿಂದ ಸೌಖ್ಯವನ್ನೂ, ಅದಕ್ಕಿಂತಲೂ ಹೆಚ್ಚಾಗಿ ನೋವು ಉಂಟು ಮಾಡುವ ವಿಷಾಂಕುರವನ್ನೂ ನೀನೇ ಉಂಟು ಮಾಡಿದೆ. ಯುಧಿಷ್ಠಿರನ ಐಶ್ವರ್ಯವನ್ನು ನೋಡಿ, ಬೆಂದು ಹೋದ ನನ್ನ ಕಣ್ಣುಗಳಿಗೆ ಬೇರೆ ಯಾವದು ತಾನೆ ಗೋಚರವಾಗುವದು. ಅವನ ಸ್ತೋತ್ರವನ್ನು ಕೇಳಿ ಕೇಳಿ ನನ್ನ ಕಿವಿಗಳೆರಡೂ ಹುಣ್ಣಾದವು. ಅವನ ವಿಭವವನ್ನು ಆಲೋಚಿಸಿ ಆಲೋಚಿಸಿ ನನ್ನ ಮನಸ್ಸೂ ಬೇಗುದಿ ಕುದಿಯುತ್ತಿರುವದು. ಅವನ ಸಂಪತ್ತನ್ನು ಹೊಗಳಿ ಹೊಗಳಿ ನಾನೂ ನಾಲಗೆಯಲ್ಲಿ ಮುಳ್ಳು ಮುರಿದುಕೊಳ್ಳಲಾರೆನು. ನೀನು ಇದನ್ನೆಲ್ಲಾ ತಿಳಿಯದವನೇ? ತಿಳಿದೂ ತಿಳಿಯದವನಂತೆ ಯಾಕೆ ನಟಿಸಿ ಅಡಿಗಡಿಗೆ ನನ್ನನ್ನು ಚುಚ್ಚುತ್ತಿರಬೇಕು? ನಿನಗೆ ಯಾವದು ತಿಳಿಯದು? ಮಯನು ಅವರಿಗೆ ಕಟ್ಟಿಕೊಟ್ಟ ಅರಮನೆಯ ಸಂಗತಿ ತಿಳಿಯದೋ? ಅಲ್ಲಿ ನಿನ್ನ ಹಿರಿಯ ಮಗನಿಗೆ ಆದ ಮಾನಭಂಗದ ಸಂಗತಿ ತಿಳಿಯದೋ? ನಾನು ಕನ್ನಡಿಯನ್ನು ಬಾಗಿಲೆಂದು ಭ್ರಮಿಸಿ, ತಲೆಯನ್ನು ತಗಲಿಸಿಕೊಂಡಾಗ, 'ಇವನು ಕುರುಡನ ಮಗನೇ ಸರಿ.' ಎಂದು ಕೈಹೊಯ್ದು ಭೀಮಸೇನನು ನಕ್ಕದ್ದು ತಿಳಿಯದೋ?" ಎಂದು ಕ್ರೂರವಾಗಿ ಮಾತನಾಡಲಾರಂಭಿಸಿದನು.

ಧೃತರಾಷ್ಟ್ರನು "ದುರ್ಯೋಧನಾ, ದುರ್ಯೋಧನಾ, ನೀನು ಹೀಗೆ ಹೇಳಬಹುದೆ? ನೀನು ನನ್ನ ಪಟ್ಟಮಹಿಷಿಯ ಉದರದಲ್ಲಿ ಹುಟ್ಟಿದವನಲ್ಲವೆ? ನಾನು ಹೇಳುವ ಮಾತುಗಳನ್ನು ಲಾಲಿಸು. ಯುಧಿಷ್ಠಿರನ ಸಂಗತಿ ನಿನಗೆ ತಿಳಿಯದೆ? ಅವನು ಏನೂ ಅರಿತವನಲ್ಲ. ಅವನು ಯಾರಿಗೆ ಏನು ದ್ರೋಹ ಮಾಡಿದಾನೆ? ನಿನಗೆ ಅವನು ಅಣ್ಣನಲ್ಲವೆ? ಅವನ ಸಂಪತ್ತಿಗೆ ನೀನು ಹೊಟ್ಟೆಗಿಚ್ಚು ಪಡಬಹುದೆ? ಅಥವಾ ಹೊಟ್ಟೆಗಿಚ್ಚು ಪಡುವದಕ್ಕೆ ಅಂಥಾ ಐಶ್ವರ್ಯವೇನು? ನಿನ್ನ ಅಸೂಯೆಯೇ ಧರ್ಮರಾಜನ ಐಶ್ವರ್ಯವನ್ನು ಮಹತ್ತಾಗಿ ತೋರಿಸುತ್ತದೆ. ಅವನ ಹಾಗೆ ಒಂದು ಯಜ್ಞವನ್ನು ಮಾಡಬೇಕೆಂದಭಿಲಾಷೆ ಇದ್ದರೆ, ನೀನೂ ಮಾಡು. ಅವನು ರಾಜಸೂಯವನ್ನು ಮಾಡಿದರೆ ನೀನು ಸಪ್ತತಂತುವನ್ನೇ ಮಾಡು. ನೀನು ಅವನ ಸಂಪತ್ತಿಗೆ ಹೊಟ್ಟೆಗಿಚ್ಚು ಪಡುವದನ್ನೂ, ಕರುಬುವದನ್ನೂ ನೋಡಿದರೆ

ನನಗೆ ಬಹಳ ಆಶ್ಚರ್ಯವಾಗುವದು. ಯಜ್ಞವನ್ನು ಮಾಡುತ್ತೀಯಾ, ಹೇಳು, ಬ್ರಾಹ್ಮಣರಿಗೆ ಈಗಲೇ ಆಜ್ಞಾಪಿಸುವೆನು. ನಿನ್ನಂಥವನು ಇತರರ ಐಶ್ವರ್ಯಕ್ಕೆ ಕರುಬುವದುಂಟೆ! ತೆಗೆತೆಗೆ, ಇದು ಅಲ್ಪತನ. ಮನಸ್ವಿಯಾದವನು ಇತರರಿಗೆ ಕೊಟ್ಟು ತನ್ನ ಬಡತನಕ್ಕೆ ಹಿಗ್ಗುವನು. ಇತರರು ತಾವಾಗಿ ಸಂಪಾದಿಸಿದ್ದಕ್ಕೆ ಸಂಕಟಪಡುವದು ನಿನಗೆ ಯೋಗ್ಯವಲ್ಲ. ಪಾಂಡವರು ನಿನ್ನ ತೋಳುಗಳೆಂದು ತಿಳಿ. ನೀನೇ ನಿನ್ನ ಕೈ ಮುರಿದುಕೊಳ್ಳುವದಕ್ಕೆ ಪ್ರಯತ್ನ ಮಾಡಬೇಡ," ಎಂದು ಹೇಳಿದನು.

ದುರ್ಯೋಧನನು "ಸ್ವತಃ ಪರ್ಯಾಲೋಚನೆಮಾಡುವ ಶಕ್ತಿಯಿಲ್ಲದವರಿಗೆ ಯಾವ ನೀತಿಯಿಂದಲೂ ಪ್ರಯೋಜನವಿಲ್ಲ. ನೀನು ಎಲ್ಲವನ್ನೂ ತಿಳಿದೂ ಹೀಗೆ ಮಾಡುವನ್ನು ನೋಡಿದರೆ ನನಗೆ ಬಹಳ ಸಂಕಟವುಂಟಾಗುವದು. ಮುಪ್ಪಿನಿಂದ ನಿನ್ನ ಬುದ್ಧಿಯು ಮಂಕಾದ ಮೇಲೆ ನಾನು ಹೇಳತಕ್ಕದ್ದೇನು ಇರುವದು? ಬಹುಶಃ ನಮ್ಮಿಬ್ಬರಿಗೂ ಇರುವ ಸಂಬಂಧವು ಚೆನ್ನಾಗಿ ಗೊತ್ತಾಗಲಿಲ್ಲವೋ, ಇಲ್ಲವೇ ಗೊತ್ತಾಗಿದ್ದೂ ಅನಾದರಣೆಯೋ? ಅಥವಾ ಅಂತಃ ಏನಾದರೂ ದ್ವೇಷವೋ? ಇನ್ನು ಮೇಲೆ ನಿನ್ನ ಮಕ್ಕಳುಬೇರೆ ಮುಂದಕ್ಕೆ ಬರಲಾರರು. ಹೆಜ್ಜೆಹೆಜ್ಜೆಗೂ ಮುಗ್ಗರಿಸುವವನ ಕೈಹಿಡಿದು ನಡೆದರೆ ಹ್ಯಾಗೆತಾನೆ ಮುಂದಕ್ಕೆ ಹೋಗಲಾದೀತು? ಎಲೈ ಮಹಾರಾಜನೇ! ನೀನು ವಿವೇಕಿಯೂ ವೃದ್ಧನೂ ಆಗಿದ್ದೀಯೆ. ನಿನ್ನ ಹಿತಾಹಿತಗಳು ನಿನಗೆ ತಿಳಿಯದೆ ಇಲ್ಲ. ಹೀಗಿರುವಲ್ಲಿ ಎಲ್ಲಾ ವಿಷಯಗಳಲ್ಲಿಯೂ ನಿನಗಿಂತ ಚಿಕ್ಕವರಾಗಿಯೂ, ಅಜ್ಞರಾಗಿಯೂ ಇರುವವರ ಮಾತನ್ನು ಯಾತಕ್ಕೆ ಕೇಳಬೇಕು? ಅವರಿವರನ್ನು ಕೇಳುವದಕ್ಕೆ ಬದಲಾಗಿ ನಮ್ಮ ಕಾರ್ಯವನ್ನು ನಾವು ಮಾಡಿಕೊಳ್ಳುವದು ಉತ್ತಮವಲ್ಲವೆ. ರಾಜರುಗಳ ವ್ಯಾಪಾರಕ್ಕೂ ಇತರಜನಗಳ ವ್ಯಾಪಾರಕ್ಕೂ ವೈಲಕ್ಷಣ್ಯವುಂಟೆಂಬ ಬೃಹಸ್ಪತಿಯ ವಾಕ್ಯವು ನಿನಗೆ ತಿಳಿಯದೊ? ಆದ್ದರಿಂದಲೇ ಅರಸರು ತಮ್ಮ ಆದಾಯದಲ್ಲಿ ಯಾವಾಗಲೂ ಕಣ್ಣಿಟ್ಟಿರಬೇಕು. ಕ್ಷತ್ರಿಯನು ತನ್ನ ಕಾರ್ಯದ ಧರ್ಮಾಧರ್ಮತೆಯನ್ನು ಫಲದಿಂದ ತಿಳಿಯುವನಲ್ಲದೆ ಬೇರೆ ಇಲ್ಲ. ಈ ವಿಷಯುಗಳಲ್ಲಿ ನೀತಿಗೀತಿಗಳ ತೊಡಕಿನಿಂದೇನು? ಶತ್ರುಗಳ ಐಶ್ವರ್ಯವನ್ನು ದೋಚಿ

ಕೊಳ್ಳಬೇಕೆಂದಿರುವವನು ಯಾವದಕ್ಕೂ ಹಿಂದೆಗೆಯದೆ ಸಾಧಿಸಬೇಕು. ಅಲ್ಲದೆ ಈ ನಿನ್ನ ಧರ್ಮೋಪದೇಶವನ್ನು ಕಟ್ಟಿಕೊಂಡು ಪಾಡುಪಟ್ಟರೆ ಅವನಿಗೆ ಕೊನೆಗೂ ಪಾಡೇ ಅಲ್ಲದೆ ಸುಖದ ಮುಖವನ್ನೇ ನೋಡುವದಕ್ಕಾಗುವದಿಲ್ಲ. ಶತ್ರು ಮಿತ್ರರಿಗೆ ಅವರವರ ಗುಣವೂ ನಡೆತೆಯೂ ಸೌಂದರ್ಯವೂ ಕಾರಣವಲ್ಲ. ನಮ್ಮ ಮನಸ್ಸಿಗೆ ಯಾವನು ನೋವು ಮಾಡುತ್ತಾನೆಯೋ ಅವನೇ ನಮಗೆ ಶತ್ರು. ಅತೃಪ್ತಿಯೇ ಸಮಸ್ತಸಂಪದಗಳಿಗೂ ಮೂಲ. ತೃಪ್ತಿಯುಂಟಾದವನು ಶ್ರಮ ಪಟ್ಟು ಯಾವ ಕಾರ್ಯವನ್ನುತಾನೆ ಸಾಧಿಸುತ್ತಾನೆ? ಆದಕಾರಣ ಮಹಾರಾಜನೇ, ನೀನೂ ನನ್ನಂತೆ ಅತೃಪ್ತನಾಗಿರು. ಯಾವ ಮನುಷ್ಯನು ಐಶ್ವರ್ಯವನ್ನು ಸಂಪಾದಿಸುವದಕ್ಕೋಸ್ಕರ ಮೈಮುರಿದುಕೊಂಡು ಒದ್ದಾಡುತ್ತಾನೆಯೋ, ಅವನೇ ನೀತಿಜ್ಞನು. ತಮಗೆ ಇರುವದನ್ನು ನೋಡಿ ಯಾರೂ ಸಂತೋಷ ಪಡಬಾರದು. ಯಾರಾದರೂ ಒಂದು ವೇಳೆ ಇದ್ದದ್ದನ್ನು ಅಪಹರಿಸಿಬಿಟ್ಟರೆ ಆ ಮೇಲೆ ಅವರ ಗತಿಯೇನು? ಆದುದರಿಂದಲೇ ವಿವೇಕಿಯಾದವನು ಪ್ರತಿಕ್ಷಣದಲ್ಲಿಯೂ ತನ್ನ ಆದಾಯವನ್ನು ನೋಡುತ್ತಿರಬೇಕಲ್ಲದೆ, ಅಧರ್ಮವೆಂತಲೂ, ಅನ್ಯಾಯವೆಂತಲೂ ಅಲೆದಾಡುತ್ತಿದ್ದರೆ, ಜೀವಾವಧಿಗೂ ಅವನಿಗೆ ಅಲೆದಾಟವೇ ಆಗುವದು. ನಮುಚಿಯನ್ನು ಇಂದ್ರನು ಕೊಂದಬಗೆ ಹ್ಯಾಗೆ? ಇದು ಸುಭಿಕ್ಷವಾದ ಕಾಲವೆಂದೂ, ಅವನು ಆಯುಧಪಾಣಿಯಾಗಿಲ್ಲವೆಂದೂ ಇಂದ್ರನು ನಿರೀಕ್ಷಿಸುತ್ತಾ ನಿಂತಿದ್ದರೆ, ಇಂದ್ರನ ಪಾಡೇನಾಗುತ್ತಿತ್ತು? ಅವನು ವಿವೇಕಿಯಾದ್ದರಿಂದಲೇ ಸಮಯವನ್ನು ನಿರೀಕ್ಷಿಸುತ್ತಿದ್ದು ನಮುಚಿಯನ್ನು ಸದೆದನು. ರಾಜರುಗಳು ಯಾವ ಪ್ರಯತ್ನವನ್ನೂ ಮಾಡದೆ ಸಂತುಷ್ಟರಾಗಿ ಇದ್ದಲ್ಲಿಯೆ ಇರುತ್ತಿದ್ದರೆ ಶತ್ರುವಿನ ಕೈಗೆ ಸಿಕ್ಕಿ, ಹಾವಿನ ಬಾಯಿಗೆ ತುತ್ತಾಗುವ ಕಪ್ಪೆಯಂತೆ ಆಗುವರು. ಉದಾಸೀನದಿಂದ ಶತ್ರುವನ್ನು ಉಳಿಯಗೊಳಿಸಿದರೆ, ಚಿಕಿತ್ಸೆಮಾಡದೆ ರೋಗವನ್ನು ಬೆಳೆಯಿಸಿದಂತಾಗುವದು. ಕ್ಷುದ್ರಶತ್ರುವೆಂದು ಉದಾಸೀನದಿಂದ ಇದ್ದರೆ ಗೆದ್ದಲನ್ನು ಕಣ್ಣಿಟ್ಟು ನೋಡದೆ ಇದ್ದಂತಾಗುವದು. ಯಾರಿಗೆ ಆಸೆಯುಂಟೋ ಅವರಿಗೆ ವೃದ್ಧಿಯೂ ಉಂಟು. ಪಾಂಡವರ ಐಶ್ವರ್ಯದಲ್ಲಿಯೇ ನನ್ನ ಮನಸ್ಸು ನಟ್ಟುಹೋಗಿರುವದು. ಅವರ ಭಾಗ್ಯವನ್ನು ತೆಗೆದುಕೊಳ್ಳುವದಕ್ಕೆ

ನನ್ನಿಂದ ಆಗುತ್ತದೆಯೋ ಇಲ್ಲವೋ ನೋಡಬೇಕು. ಆಗದ ಪಕ್ಷಕ್ಕೆ ಪ್ರಯತ್ನದಲ್ಲಿಯಾದರೂ ಈ ದೇಹವನ್ನು ಬಿಡುವದು ಮೇಲು. ಜೀವದ ಮೇಲಣ ಆಸೆಯನ್ನೇ ತೊರೆದ ನನಗೆ ನಿಮ್ಮ ಯಾವ ತಾತ್ಪರ್ಯವೂ ರುಚಿಸುವದಿಲ್ಲ. ಆದಕಾರಣ ಈ ಅರಣ್ಯರೋದನದಿಂದೇನು ಫಲ ?" ಎಂಬದಾಗಿ ದುರ್ಯೋಧನನು ನುಡಿದನು.

"ನಿನಗೆ ಅವರ ಐಶ್ವರ್ಯದಲ್ಲಿ ಇಷ್ಟು ಆಸೆ ಇದ್ದರೆ, ಅದನ್ನು ತೆಗೆದುಕೊಳ್ಳುವದು ಎಷ್ಟರ ಕೆಲಸ? ನಿನ್ನ ಬಾಣವೂ ಬೇಡ, ನಿನ್ನ ಬಿಲ್ಲೂ ಬೇಡ, ನಿನ್ನ ಯುದ್ಧವೂ ಬೇಡ. ನನ್ನ ಯುದ್ಧದ ಸಾಮುಗ್ರಿಗಳನ್ನು ತೋರಿಸುತ್ತೇನೆ, ನೋಡು. ಇದೋ, ಈ ಶಾರಿಯೇ ನನ್ನ ಬಾಣ, ಈ ದಾಳವೇ ನನ್ನ ಬಿಲ್ಲು. ಇವೆರಡರಿಂದಲೇ ಒಂದು ಹನಿ ರಕ್ತವನ್ನೂ ಚೆಲ್ಲದೆ ಎಲ್ಲವನ್ನೂ ಜಯಿಸಿಕೊಡುವೆನು. ನೀನು ಧರ್ಮರಾಜನನ್ನು ಮಾತ್ರ ಬರಿಸು. ಅಷ್ಟು ಸಾಕು. ನಿಂತ ಕೆಲಸ ನನಗಿರಲಿ." ಎಂದು ಶಕುನಿಯು ಸಮಯವನ್ನರಿತು ಹೇಳಿದನು.

ಕೂಡಲೆ ದುರ್ಯೋಧನನು "ಇದಕ್ಕಿಂತಲೂ ಬೇರೆ ಸಮಯವು ಯಾವದು ದೊರಕುವದು? ನೀನು ಶಕುನಿಯು ಹೇಳಿದ್ದಕ್ಕೆ ಅನುಮತಿಯನ್ನು ಕೊಡು." ಎಂದು ತಂದೆಯನ್ನು ಕೇಳಿಕೊಂಡನು.

ಧೃತರಾಷ್ಟ್ರನು "ನಾನು ವಿದುರನ ಮಾತನ್ನು ಮಿಾರುವವನಲ್ಲ. ನಾನು ಅವನನ್ನು ಕೇಳದೆ ಯಾವದಕ್ಕೂ ಅನುಮತಿಕೊಡಲಾರೆನು." ಎಂದು ಹೇಳಿದನು.

"ವಿದುರನು ಯಾವಾಗಲೂ ಪಾಂಡವಪಕ್ಷಪಾತಿ. ನಮ್ಮಲ್ಲಿ ಅವನಿಗಿರುವ ಪ್ರೀತಿಯು ತಿಳಿದೇ ಇದೆ. ಅವನು ಹೇಳುವ ಪ್ರತ್ಯುತ್ತರವನ್ನು ನಾನೇ ಹೇಳಬಲ್ಲೆ. ಅವನನ್ನು ಯಾತಕ್ಕೆ ಕೇಳಿ ಶ್ರಮಪಡಬೇಕು? ಲೋಕದಲ್ಲಿ ಒಬ್ಬರ ಅಭಿಪ್ರಾಯದಂತೆ ಬೇರೊಬ್ಬರ ಅಭಿಪ್ರಾಯವಿರುವದಿಲ್ಲ. ಹೀಗೆ ಊರಿನವರೆಲ್ಲಾ ಒಪ್ಪಿ ನಮಗೂ ಸಂಪತ್ತು ಬರಬೇಕಾದರೆ, ಬ್ರಹ್ಮನಲ್ಲಿ ಆಯುಸ್ಸನ್ನು ಕೇಳಿಕೊಂಡು ಬರಬೇಕು. ಈ ಸಮಯುಗಿಮುಯಗಳು ನನಗೆ ಅವಶ್ಯಕವಿಲ್ಲ. ಕೈಯಲ್ಲಿ ಬಲವು ಕೂಡುವದಕ್ಕೆ ಮುಂಚೆಯೇ ಈ ಕಾರ್ಯವನ್ನು ಮಾಡಿಯೇ ಬಿಡಬೇಕು." ಎಂದನು.

ಧೃತರಾಷ್ಟ್ರನು "ಅಯ್ಯಾ, ನನಗೆ ಬಲವದ್ವಿರೋಧ ಸಮ್ಮತವಲ್ಲ. ಅದರಿಂದುಂಟಾಗುವ ಹಾನಿಗಳು ಅಪಾರವಾಗಿರುವವು. ನೀನು ಈ ದ್ಯೂತವೇನೋ ಬಹಳ ಸೌಮ್ಯವಾದದ್ದೆಂದು ಭ್ರಮಿಸುವಂತೆ ತೋರುತ್ತದೆ. ಅದರ ಬೆನ್ನಿನಲ್ಲಿರುವ ಮೊನೆಯ ಬಾಣವನ್ನೂ ಮಸೆಯ ಕತ್ತಿಯನ್ನೂ ನೀನು ಕಾಣೆ." ಎಂದನು.

"ಇದು ಈ ದಿವಸದ ನವೀನವ್ಯಾಪಾರವಲ್ಲ. ಇದರಲ್ಲಿ ನಿನ್ನ ಕತ್ತಿಯೂ ಇಲ್ಲ, ನಿನ್ನ ಬಾಣವೂ ಇಲ್ಲ. ಇದರಲ್ಲಿ ಯಾವ ಭಯವೂ ಕೆಲಸವಿಲ್ಲ. ಶಕುನಿ ಹೇಳಿದಂತೆ ದ್ಯೂತಾಗಾರವನ್ನು ಕಟ್ಟುವದಕ್ಕೆ ಶಿಲ್ಪಿಗಳಿಗೆ ಆಜ್ಞಾಪಿಸು. ಅದನ್ನು ಕಟ್ಟುವಾಗಲೆ ನಮ್ಮ ಸಂಪತ್ತಿಗೂ ಒಂದು ಮನೆಯನ್ನು ಕಟ್ಟದೆವೆಂದು ತಿಳಿ." ಎಂದನು.

"ನಿನ್ನ ವಾಕ್ಯಗಳು ನನಗೆ ಸ್ವಲ್ಪವೂ ಸಮರ್ಪಕವಲ್ಲ. ನಿನ್ನ ಇಷ್ಟಾನುಸಾರವಾಗಿ ನಡೆಯಬಹುದು. ಇಗೋ ಕೇಳು, ಒಂದು ಸಾರಿ ಹೇಳುತ್ತೇನೆ. ಇದರಿಂದ ನಿನಗೆ ಮುಂದಕ್ಕೆ ಒಳ್ಳೆಯದು ಎಂದಿಗೂ ಆಗಲಾರದು. ಇದು ಚೆನ್ನಾಗಿ ತಿಳಿದಿರಲಿ. ಧರ್ಮಜ್ಞನಾದ ವಿದುರನು ಹೇಳಿದಂತೆ ನಮ್ಮ ಕುಲಕ್ಕೆ ವಿನಾಶವೇ ಸಮೀಪಿಸಿತು. ನಿನ್ನ ಇಷ್ಟವಿದ್ದಂತೆ ಮಾಡು. ವಿಧಿಯನ್ನು ಮೀರುವದಕ್ಕೆ ಯಾರಿಗೂ ಸಾಧ್ಯವಲ್ಲ. ಆದದ್ದು ಆಗಲಿ." ಎಂದು ಹೇಳಿ, ಆಳುಗಳನ್ನಟ್ಟಿ ಶಿಲ್ಪಿಗಳನ್ನು ಕರೆಯಿಸಿ, "ಎಲೈ ಶಿಲ್ಪಿಗಳಿರಾ, ನಿಮ್ಮ ಬುದ್ಧಿವಂತಿಕೆಯೆಲ್ಲವನ್ನೂ ಉಪಯೋಗಿಸಿ ವಿಚಿತ್ರವಾದ ಒಂದು ದ್ಯೂತಗೃಹವನ್ನು ಕ್ಷಿಪ್ರದಲ್ಲಿ ಕಟ್ಟಿ." ಎಂದು ಆಜ್ಞಾಪಿಸಿ, ಆ ದ್ಯೂತದ ಅರಮನೆಯು ಸಿದ್ಧವಾದ ಕೂಡಲೆ ವಿದುರನನ್ನು ಕರೆಯಿಸಿ, "ನೀನು ಹೋಗಿ ಧರ್ಮರಾಜನನ್ನೂ ಅವನ ತಮ್ಮಂದಿರನ್ನೂ ಕರೆದುಕೊಂಡು ಬಾ. ಅವರು ಈ ಅರಮನೆಯನ್ನು ನೋಡಿ ಸಂತೋಷಪಡಲಿ. ಇಲ್ಲಿ ವಿನೋದವಾಗಿ ಒಂದೆರಡಾಟ ಪಗಡೆಯಾಡಲಿ." ಎಂದು ಆಜ್ಞಾಪಿಸಿದನು.

"ಈ ಅರ್ಥಕ್ಕೆ ನನ್ನ ಮನಸ್ಸು ಒಡಂಬಡುವದಿಲ್ಲ. ನೀನು ಮಾಡಿದ್ದು ತಪ್ಪು." ಎಂದು ವಿದುರನು ಹೇಳಲು; "ದೈವವನ್ನು ಯಾರೂ ಮೀರಲಾರರು. ನೀನು ಹೋಗು." ಎಂದು ಹೇಳಿ ಧೃತರಾಷ್ಟ್ರನು ವಿದುರನನ್ನು ಕಳುಹಿದನು.

ಕೂಡಲೆ ವಿದುರನು ಬಹುವೇಗವಾದ ಕುದುರೆಗಳನ್ನು ಹೂಡಿದ ರಥವನ್ನೇರಿ, ಪಾಂಡವರ ರಾಜಧಾನಿಗೆ ಹೋಗಿ ಸೇರಿ, ಯುಧಿಷ್ಠಿರನ ಅರಮನೆಯನ್ನು ಪ್ರವೇಶಿಸಿ, ರಾಜನನ್ನು ಕಾಣಿಸಿಕೊಂಡು, ಅವನಿಂದ ಯಥೋಚಿತವಾದ ಸನ್ಮಾನಗಳನ್ನು ಸ್ವೀಕರಿಸಿದ ಬಳಿಕ ದೀನಮುಖನಾಗಿ ಕುಳಿತುಕೊಂಡನು.

ಅದನ್ನು ನೋಡಿ, " ಚಿಂತೆಗೆ ಕಾರಣವೇನು? ಅಲ್ಲಿ ಎಲ್ಲರೂ ಕುಶಲರೆ? ಮಕ್ಕಳೆಲ್ಲರೂ ಮಹಾರಾಜನ ಮಾತನ್ನು ಮೀರದಿರುವರೆ? ಗಾಂಧಾರೀದೇವಿಯೇಮೊದಲಾದ ಮಾತೃವರ್ಗದವರೆಲ್ಲರೂ ಸುಖವಾಗಿರುವರೋ ಇಲ್ಲವೋ? ನಿನ್ನ ಮುಖದಲ್ಲಿ ಈ ಮ್ಲಾನತೆಯುಂಟಾಗುವದಕ್ಕೆ ಕಾರಣವೇನು ? " ಎಂದು ಧರ್ಮಜನು ಬೆಸಗೊಂಡನು.

" ಅಲ್ಲಿ ಎಲ್ಲರೂ ಕ್ಷೇಮದಲ್ಲಿರುವರು. ಮಹಾರಾಜನು ನಿಮ್ಮ ಕುಶಲಪ್ರಶ್ನೆಯನ್ನು ಕೇಳಿ, ತಾನು ಹೊಸತಾಗಿ ಕಟ್ಟಿಸಿರುವ ಅರಮನೆಯನ್ನು ನೋಡುವದಕ್ಕಾಗಿ ನಿಮ್ಮನ್ನು ಕರೆದುಕೊಂಡು ಬರುವಂತೆ ನನಗೆ ಆಜ್ಞಾಪಿಸಿದನು. ಅಲ್ಲಿ ಶಕುನಿಯೇ ಮುಖ್ಯರಾದ ಕೌಟಿಲ್ಯಕಲಾವಿದರೂ, ವಂಚನೋಪಾಯಕೋವಿದರೂ, ದ್ಯೂತವಿದ್ಯಾವಿಶಾರದರೂ ಸೇರಿರುವರು. ಅಲ್ಲಿ ನೀವೂ ಆಡಬೇಕೆಂಬುವದೇ ಮಹಾರಾಜನ ಅಭಿಮತವು. " ಎಂದನು.

ಅದನ್ನು ಕೇಳಿ, ಧರ್ಮರಾಜನು "ದ್ಯೂತವಾಡುವದು ಯಾವ ಧರ್ಮ? ಯಾವ ನೀತಿ? ಆಡತಕ್ಕ ಶಕುನಿಯೇಮೊದಲಾದವರು ವಂಚನೋಪಾಯವೇ ಪರಮ ಪುರುಷಾರ್ಥವೆಂದು ಬಗೆದಿರುವವರು. ಮಹಾರಾಜನಿಗೂ ತನ್ನ ಪುತ್ರರ ಆಧಿಕ್ಯದಲ್ಲಿಯೇ ಅಭಿಲಾಷೆ ಇರುವದು. ನನಗೆ ಇದರಲ್ಲಿ ಇಷ್ಟವಿಲ್ಲ. ಈ ಸಂದರ್ಭದಲ್ಲಿ ನಾನು ಯಾವ ರೀತಿಯಲ್ಲಿ ನಡೆದುಕೊಳ್ಳಬೇಕೋ ಆಜ್ಞಾಪಿಸಬೇಕು." ಎಂದನು.

ವಿದುರನು " ನೀನು ಸಕಲವನ್ನೂ ತಿಳಿದವನು. ನಿನಗೆ ನಾನು ಹೇಳತಕ್ಕದ್ದೇನಿದೆ. ಯಾವದು ಉಚಿತವಾಗಿ ತೋರುವದೋ, ಆ ರೀತಿಯಲ್ಲಿ ನಡೆ." ಎಂದನು. " ನಾನುಬೇರೆ ಆಟವನ್ನು ಆಡುವದಿಲ್ಲ. ಶಕುನಿಯು ಒಂದು ವೇಳೆ ಕರೆದರೆ ನಾನು ಆಡದೆ ಇರುವದಕ್ಕಾಗುವದಿಲ್ಲ." ಎಂದು ಹೇಳಿ, ಕಾಲವಿಳಂಬವನ್ನು ಮಾಡದೆ, ಜಾಗ್ರತೆಯಲ್ಲಿಯೇ ಪ್ರಯಾಣಕ್ಕೆ ಸಿದ್ಧನಾಗಿ ವಿದುರನೊಡ

ನೆಯೂ ಸಹೋದರರೊಡನೆಯೂ ರಾಣಿವಾಸದವರೊಡನೆಯೂ ಕೂಡಿ, ಸ್ವಲ್ಪಸೈನ್ಯದೊಡನೆ ಹಸ್ತಿನಾವತಿಯನ್ನು ಸೇರಿ, ಇದಿರುಗೊಂಡ ಭೀಷ್ಮಾದಿಗ ಳೊಡನೆ ಅರಮನೆಯನ್ನು ಪ್ರವೇಶಿಸಿ, ಧೃತರಾಷ್ಟ್ರಾದಿಗಳನ್ನೂ ಗಾಂಧಾರಿಯೇ ಮೊದಲಾದವರನ್ನೂ ಯಥೋಚಿತವಾಗಿ ಕಂಡು, ಅವರಿಂದ ಸತ್ಕೃತನಾಗಿ, ಅಲ್ಲಿಯೇ ಇಳಿದುಕೊಂಡನು.

ಆ ರಾತ್ರಿ ಕಳೆದು, ಮರುದಿನ ಭೋಜನವಾದಮೇಲೆ ತಮ್ಮಂದಿರೊಡ ಗೂಡಿ ಜನನಿಬಿಡವಾದ ದ್ಯೂತಗೃಹವನ್ನು ಪ್ರವೇಶಿಸಿ, ತನಗೆ ಯೋಗ್ಯವಾದ ಆಸನದಲ್ಲಿ ಕುಳಿತುಕೊಂಡನು. ತಮ್ಮಂದಿರೂ ತಮತಮಗೆ ಉಚಿತವಾದ ಆಸ ನಗಳಲ್ಲಿ ಕುಳಿತುಕೊಂಡರು. ಕೂಡಲೆ ಅಲ್ಲಿದ್ದ ಜೂದುಗಾರರೆಲ್ಲಾ ಧರ್ಮರಾಜ ನನ್ನು ನೋಡಿ ಮನಸ್ಸಿನಲ್ಲಿ ಹಿಗ್ಗಿಹೋದರು.

ಆಗ ಸಭೆಯಲ್ಲಿ ಶಕುನಿಯು ಧರ್ಮರಾಜನನ್ನು ಕುರಿತು, "ಎಲೈ ಧರ್ಮನಂ ದನನೆ, ನಿನ್ನ ಬರವನ್ನೇ ಹಾರೈಸುತ್ತಾ ನಾವೆಲ್ಲರೂ ಬಲುಲವಲವಿಕೆಯಿಂದ ಇದ್ದೆವು. ಇನ್ನುಮೇಲೆ ನಾವು ಆಟವನ್ನು ಆರಂಭಿಸೋಣ." ಎಂದನು.

"ಟಕ್ಕಿಗೆ ತೌರುಮನೆಯಾದ ಈ ಜೂದಾಟವನ್ನು ಏನೆಂದು ಹೊಗಳು ತ್ತೀಯೆ? ಇದರಲ್ಲಿ ಯಾವ ಧರ್ಮವುಂಟು? ಯಾವ ವಿವೇಕಿಗಳುತಾನೆ ಇದನ್ನು ಶ್ಲಾಘಿಸುತ್ತಾರೆ. ಶಕುನೀ, ನೀನು ಮೋಸಗಾರನಂತೆ ನಮ್ಮನ್ನು ವಂಚಿಸ ಬೇಡ." ಎಂದು ಧರ್ಮರಾಜನು ಹೇಳಿದನು.

"ಎಲೈ ಧರ್ಮಪುತ್ರನೇ, ಆಟದ ಹುಳುಕುಗಳನ್ನೆಲ್ಲಾ ತಿಳಿದ ಜೂದಾಳಿಗೆ ಸೋಲುಗೆಲವು ರುಚಿಸುವದು; ಮಿಕ್ಕಾದವರಿಗೆ ಹ್ಯಾಗೆ ತಿಳಿದೀತು? ಆಟದಲ್ಲಿ ಇಬ್ಬರಲ್ಲಿ ಒಬ್ಬನಿಗೆ ಸೋಲು ಸಹಜ. ಆದ ಮಾತ್ರಕ್ಕೆ ಜೂದು ಕೆಟ್ಟದ್ದೇ? ಆಟದಲ್ಲಿ ಯಾವ ನಷ್ಟವೂ ಉಂಟಾಗುವದಿಲ್ಲ. ಅದರಲ್ಲಿ ಒಡ್ಡುವ ದ್ರವ್ಯದಿಂದ ನಮಗೆ ಅಲ್ಪಸ್ವಲ್ಪ ನಷ್ಟವಾಗಬಹುದಲ್ಲದೆ, ಮತ್ತೇನೂ ಇಲ್ಲ. ನೀನು ಹೆದರ ಬೇಡ. ಆರಂಭಿಸು. ವೃಥಾಕಾಲಹರಣವನ್ನು ಮಾಡಬೇಡ." ಎಂದನು;

"ಜೂದು ಬಹಳ ಕೆಟ್ಟದ್ದೆಂತಲೂ, ಅದರಲ್ಲಿ ಅಧರ್ಮದಿಂದಲೇ ಜಯವುಂ ಟಾಗಬೇಕೆಂತಲೂ ಹಿರಿಯರು ತಿಳಿಸುವರು. ಹೀಗೆ ಅಮಾರ್ಗದಲ್ಲ ಜಯಿಸು

ವದಕ್ಕಿಂತ ಯುದ್ಧದ ಮೂಲಕ ಜಯಹೊಂದುವದು ಕ್ಷತ್ರಿಯನಿಗೆ ಮೇಲು. ಆದ್ದರಿಂದ ಜೂದು ಕೆಟ್ಟದ್ದು." ಎನಲು;

ಶಕುನಿಯು "ಜೂದು ಕೆಟ್ಟದ್ದೆಂದು ಹೇಳಿದೆಯಲ್ಲಾ! ಅದರಲ್ಲಿ ಧರ್ಮಮಾರ್ಗದಲ್ಲಿನ ಸೋಲುಗೆಲವುಗಳಿಲ್ಲವೇ-ದೆಯಲ್ಲಾ! ಇವೆಲ್ಲಾ ನಿನ್ನ ನ್ಯಾಯವಾದ ಯುದ್ಧದಲ್ಲಿವೆಯೋ? ಆದೂ ಹಾಗಿರಲಿ. ಒಬ್ಬ ಪಂಡಿತನು ಮತ್ತೊಬ್ಬ ಪಂಡಿತನನ್ನು ವಾದದಲ್ಲಿ ಜಯಿಸಬೇಕೆಂದು ಬರುತ್ತಾನಲ್ಲ; ಇದು ಯಾವ ನ್ಯಾಯ? ಜೂದಿನಲ್ಲಿಯೂ ಹಾಗೆಯೆ. ಕೈಲಾಗದವನನ್ನು ಗೆಲ್ಲಬೇಕೆಂಬುವದು ಅನ್ಯಾಯವೂ ಅಲ್ಲ, ಮೋಸವೂ ಅಲ್ಲ. ಆದಕಾರಣ ನಾನು ಮೋಸಗಾರನೆಂಬ ಭಾವವು ನಿನ್ನ ಮನಸ್ಸಿನಲ್ಲಿದ್ದರೆ, ನೀನು ಆಟವಾಡಬೇಡ." ಎಂದನು.

ಧರ್ಮರಾಜನು "ಕರೆದಮೇಲೆ ನಾನು ಬರಲೊಲ್ಲೆನೆಂದು ಹೇಳುವದಿಲ್ಲ. ಯಾವದಕ್ಕಾದರೂ ಸರಿ, ಕರೆದರೆ ಬರುವದು ನನ್ನ ಸಂಕಲ್ಪ. ಅದೃಷ್ಟವಿದ್ದಂತಾಗಲಿ. ಇಲ್ಲಿ ನಾನು ಯಾರೊಡನೆ ಆಡಬೇಕು. ಯಾರು ನನ್ನಷ್ಟು ಒಡ್ಡತಕ್ಕವರು." ಎಂದನು.

ದುರ್ಯೋಧನನು "ನಾನು ಒಡ್ಡುತ್ತೇನೆ. ನಮ್ಮ ಶಕುನಿಯು ನನ್ನ ಕಡೆಯವನಾಗಿ ಆಡುವನು. ಎನಲು;

ಧರ್ಮರಾಜನು "ಒಬ್ಬನಿಗಾಗಿ ಒಬ್ಬನು ಆಡುವದು ಶಾಸ್ತ್ರಸಮ್ಮತವಲ್ಲ. ಆದರೂ ಬಾಧೆಯಿಲ್ಲ. ಆಡಬೇಕೆಂದಿದ್ದರೆ ಆರಂಭಿಸು. ಇದೋ, ನನ್ನಲ್ಲಿರುವ ಈ ಮುಕ್ತಾಹಾರವನ್ನು ಇಟ್ಟಿರುವೆನು. ನೀನು ನಿನ್ನದನ್ನು ಒಡ್ಡು." ಎನಲು;

ದುರ್ಯೋಧನನು "ಇದೋ, ಈ ಆಭರಣಗಳೇ ನನ್ನ ಪಣವು." ಎಂದನು.

ಶಕುನಿಯು ದಾಳವನ್ನು ತೆಗೆದುಕೊಂಡು "ಇಗೋ, ಇದನ್ನು ಗೆದ್ದೆನು." ಎಂದು ನೆತ್ತವನ್ನು ಉರುಳಿಸಿದನು.

"ಈಸಲ ನಾನು ಒಡ್ಡಿದ್ದನ್ನು ನೀನು ಮೋಸದಿಂದ ಗೆದ್ದುಕೊಂಡೆ. ಈ ಗೆಲವಿಗೆ ನೀನು ಮೆರೆಯಬೇಡ. ಸಾಸಿರಾರು ದೀನಾರಗಳನ್ನು ಒಡ್ಡಿ ಆಡೋಣ. ಸಾಸಿರಾರು ವರಹಗಳಿರುವ ನಮ್ಮ ಬೊಕ್ಕಸದ ಐಶ್ವರ್ಯವನ್ನು ಒಡ್ಡುವೆನು." ಎನಲು;

ಶಕುನಿಯು ನೆತ್ತವನ್ನುರುಳಿಸಿ "ಇಗೋ! ಎಲ್ಲವೂ ನನ್ನದಾದವು." ಎಂದು ಕೂಗಿಕೊಂಡನು.

ಹೀಗೆ ಧರ್ಮಪುತ್ರನು ಒಡ್ಡಿದವುಗಳೆಲ್ಲಾ ಶಕುನಿಯ ಪಾಲಾದವು. ಕೊನೆಗೆ ತುರಗಾಷ್ಟಕದಿಂದ ಮನೋಜ್ಞವಾದ ರಥವನ್ನೂ, ಸರ್ವಾಭರಣಭೂಷಿತರಾದ ಸಾಸಿರಾರು ದಾಸೀ ಜನಗಳನ್ನೂ, ನೂರಾರು ಮಂದಿ ಸಮರ್ಥರಾದ ಪರಿಚಾರಕ ರುಗಳನ್ನೂ, ಅಲಂಕೃತಗಳಾದ ಮದಗಜಗಳನ್ನೂ, ಅಸಂಖ್ಯಾತರಾದ ವೀರಭಟ ರನ್ನೂ, ತಿತ್ತಿರಿ ಕಲ್ಮಾಷ ಗಂಧರ್ವಾದಿ ವಂಶೋತ್ಪನ್ನಗಳಾದ ದಿವ್ಯಾಶ್ವಸಮೂಹ ವನ್ನೂ, ಕಲಿಗಳಾದ ಅರುವತ್ತು ಸಾಸಿರ ಕಾಲಾಳುಗಳನ್ನೂ, ನಾನೂರು ನಿಧಿ ಗಳನ್ನೂ, ಒಂದೊಂದಾಗಿ ಒಡ್ಡಿ ಎಲ್ಲವನ್ನೂ ಮೋಸದಿಂದ ಕಳೆದುಕೊಂಡನು. ಯುಧಿಷ್ಠಿರನಿಗೆ ಈ ರೀತಿಯಾಗಿ ಎಲ್ಲವೂ ಹೋಗಿಬಿಡುವದನ್ನು ನೋಡುತ್ತಿದ್ದ ವಿದುರನು, ಇನ್ನು ಸುಮ್ಮನಿರುವದು ಸರಿಯಲ್ಲವೆಂದೆಣಿಸಿ, ಧೃತರಾಷ್ಟ್ರನನ್ನು ನೋಡಿ ಇಂತೆಂದನು :—

"ಎಲೈ ಮಹಾರಾಜನೆ, ನನ್ನ ಬಿನ್ನಪವನ್ನು ಲಾಲಿಸು. ಯಮನದಾಡೆ ಯಲ್ಲಿ ಸಿಕ್ಕಿರುವವನಿಗೆ ಔಷಧವು ಹ್ಯಾಗೆ ಪಥ್ಯವಲ್ಲವೋ, ಹಾಗೆಯೇ ನನ್ನ ಮಾತುಗಳೂ ನಿನಗೆ ರುಚಿಯಾಗಿರಲಾರವು. ಆದಾಗ್ಯೂ ಹೇಳುತ್ತೇನೆ, ಕೇಳು. ಈ ದುರ್ಯೋಧನನು ಹುಟ್ಟಿ ಏಕಾರವಾದ ಧ್ವನಿಯಿಂದ ಅತ್ತಾಗಲೆ ನಮ್ಮ ಕುಲಕ್ಕೆ ಮೃತ್ಯುವು ಬಂತೆಂದು ಭಾವಿಸಿದೆವು. ನಿನ್ನ ಮನೆಯಲ್ಲಿ ದುರ್ಯೋಧನವೇಷ ದಿಂದ ಒಂದು ಗುಳ್ಳೆಸರಿಯು ಹೊಕ್ಕಿರುವದು. ನಿನ್ನ ಅವಿವೇಕದಿಂದ ನಿನಗೆ ಯಾವದೂ ಗೊತ್ತಾಗುವದಿಲ್ಲ. ತನಗಾಗುವ ಕೇಡನ್ನರಿಯದೆ ಜೇನುತುಪ್ಪ ಕ್ಕಾಗಿ ಬಂಡೆಯನ್ನು ಹತ್ತುವವನಂತೆ ಮುಂದೆ ಬರುವ ಅಪಾಯವನ್ನು ಬಗೆಯ ದೆ ಜೂದಿನ ಗೆಲವಿನಲ್ಲಿ ಹಿಗ್ಗಿಹೋಗೀಯೆ. ಈ ಮಹಾಶೂರರಲ್ಲಿ ಹಗೆ ಕಟ್ಟಿ ಕೊಂಡು ಕೈಯೊಡನೆ ಕಾಣುವದನ್ನು ಅರಿಯದೆ ಇರುತ್ತೀಯೆ. ಇವನನ್ನು ನೀನು ತ್ಯಜಿಸು. ಲೋಕೋಪಕಾರಾರ್ಥವಾಗಿ ಅನೇಕರು ತಮ್ಮ ಮಕ್ಕಳನ್ನು ತ್ಯಜಿಸಲಿಲ್ಲವೆ? ಅಂಧಕರೂ, ಯಾದವರೂ, ಭೋಜರೂ ಸೇರಿ ಕಂಸನನ್ನು ತೊರೆದುಬಿಡಲಿಲ್ಲವೆ? ಆದೇ ಕಂಸನನ್ನು ಕೃಷ್ಣನು ಕೊಂದಾಗ ಎಲ್ಲರೂ ಹಿಗ್ಗಿ ಕೃಷ್ಣನನ್ನು ಕೊಂಡಾಡಲಿಲ್ಲವೆ? ಹಾಗೆಯೇ ಅರ್ಜುನನು ಸುಯೋಧನನನ್ನು ಸಂಹರಿಸಿಬಿಡಲಿ. ಒಂದು ಕಾಗೆಯನ್ನು ಬಲಿಗೊಟ್ಟು ಈ ಐದು ನವಿಲುಗ

ಳನ್ನು ಕೊಂಡುಕೊ. ಒಂದು ನರಿಗೆ ಬದಲಾಗಿ ಐದು ಹುಲಿಗಳನ್ನು ಸಂಪಾದಿಸು. ಕುಲಕ್ಕೋಸ್ಕರ ಒಬ್ಬ ಮಗನನ್ನೂ, ಊರಿಗಾಗಿ ಕುಲವನ್ನೂ, ನಾಡಿನ ಸುಖಕ್ಕೋಸ್ಕರವಾಗಿ ಊರನ್ನೂ, ತನ್ನ ಆತ್ಮಕ್ಕಾಗಿ ಈ ಪ್ರಪಂಚವನ್ನೂ ತೊರೆದು ಬಿಡಬಹುದೆಂದು ಹಿರಿಯರು ಹೇಳುವರು. ಪ್ರತಿದಿನವೂ ಚಿನ್ನವನ್ನು ಕಾರುತ್ತಿದ್ದ ಕೆಲವು ಪಕ್ಷಿಗಳನ್ನು ಹಿಡಿತರಿಸಿ, ಅತ್ಯಾಶೆಯಿಂದ ಅವುಗಳ ಹೊಟ್ಟೆಯಲ್ಲಿರುವ ಚಿನ್ನವನ್ನೆಲ್ಲಾ ಅಪಹರಿಸಬೇಕೆಂದೆಣಿಸಿ, ಒಬ್ಬ ದೊರೆಯು ಆ ಪಕ್ಷಿಗಳನ್ನೆಲ್ಲಾ ಕೊಂದಿಕ್ಕಿದನೆಂಬ ಕಥೆಯುಂಟು. ನೀನೂ ಆರೀತಿಯಲ್ಲಿ ನಡೆಯಬೇಡ. ಹೂದೋಟದವನು ಗಿಡಗಳಿಗೆ ನೀರು ಹೊಯ್ದು ಹೂವನ್ನು ಮಾತ್ರ ತೆಗೆದುಕೊಳ್ಳುವಂತೆ ಮಾಡು. ಉರಿಗಾಳಿಯಂತೆ ಎಲ್ಲವನ್ನೂ ಸುಟ್ಟು ಕರಿಕು ಮಾಡಿಬಿಡಬೇಡ. ಜೂದು ಯಾರಿಗೂ ತರವಲ್ಲ. ಇದರಿಂದ ದುರ್ಯೋಧನನಿಗೆ ಅನೇಕರು ದ್ವೇಷಿಗಳಾಗುವರು. ಗೂಳಿಯು ಕೊಬ್ಬಿನಿಂದ ಬೆಟ್ಟವನ್ನು ತಿವಿದು ತನ್ನ ಕೊಂಬುಗಳನ್ನು ಮುರಿದುಕೊಳ್ಳುವಂತೆ ದುರ್ಯೋಧನನು ಮಾಡುತ್ತಿರುವನು. ಎಲೈ, ಶಂತನುಕುಮಾರರಿರಾ, ಪ್ರತೀಪಸುತರಿರಾ, ನೀವುಗಳೆಲ್ಲಾ ಕೇಳಿ. ಈ ದಾವಾಗ್ನಿಯಲ್ಲಿ ನೀವು ಸಿಲುಕಿದಿರಿ. ವೃಕೋದರಾದಿ ಪಾಂಡವರೂ ಕುಪಿತರಾಗಿ ನಿಂತರೆ, ನಿಮಗೆ ಯಾರು ಶರಣು? ಎಲೈ ಮಹಾರಾಜನೇ, ನೀನು ಇದರಿಂದ ಯಾವ ಐಶ್ವರ್ಯವನ್ನು ಸಂಪಾದಿಸಬೇಕು? ಪಾಂಡವರ ಐಶ್ವರ್ಯವನ್ನು ಕೋರುವದಕ್ಕಿಂತ ಅವರನ್ನೇ ಸಂಪಾದಿಸಿಕೊಳ್ಳಬಾರದೇ! ಶಕುನಿಯ ಆಟದ ಸಂಗತಿಯನ್ನು ಯಾರು ಕಾಣರು? ಅವನು ಎಲ್ಲಿಂದ ಬಂದನೋ ಅಲ್ಲಿಗೆ ಮರಳಿ ಹೋಗಲಿ. ಪಾಂಡವರಲ್ಲಿ ಕಲಹವನ್ನು ಬಳೆಯಿಸಬೇಡ." ಎಂದನು.

"ಓ ಕ್ಷತ್ತಾ, ನೀನು ನಮ್ಮನ್ನು ದೂಷಿಸುವದೂ, ನಮ್ಮ ಹಗೆಗಳನ್ನು ಭೂಷಿಸುವದೂ ಹೊಸತಲ್ಲ. ನಿನಗೆ ಯಾರಲ್ಲಿ ಅಭಿಮಾನವೋ, ಅದನ್ನೂ ಬಲ್ಲೆನು. ನಾವಂತೂ ನಿನ್ನ ಮಕ್ಕಳಲ್ಲ. ಇಷ್ಟರಿಗೆ ಒಳ್ಳೆಯದನ್ನೂ ಅಲ್ಲದವರಿಗೆ ಕೆಡಕನ್ನೂ ತೋರುವದೇ ಲೋಕಸ್ವಭಾವ. ಆದ್ದರಿಂದಲೆ ನಿನಗೆ ಇಂಥವರಲ್ಲಿ ಪ್ರೀತಿಯೆಂಬುವದು ವ್ಯಕ್ತವಾಯಿತು. ನಿನ್ನ ಮಾತು ನಿನ್ನ ಹೃದಯವನ್ನು

ತೋರಿಸುತ್ತದೆ. ನಿನ್ನನ್ನು ಸಾಕಿದ್ದು ಹಾವಿಗೆ ಹಾಲೆರೆದಂತೆ ಆಯಿತು. ಸ್ವಾಮಿ ದ್ರೋಹಕ್ಕಿಂತಲೂ ಘೋರವಾದ ಪಾತಕವಿಲ್ಲವೆಂದು ಹೇಳಿಕೊಳ್ಳುತ್ತಾರೆ. ನೀನುಮಟ್ಟಿಗೆ ಈ ಪಾಪಕ್ಕೆ ಹೆದರುವ ಹಾಗಿಲ್ಲ. ಅದೂ ಹಾಗಿರಲಿ. ಹಗೆಗಳನ್ನು ಸೋಲಿಸಿ ಅವರ ಐಶ್ವರ್ಯವನ್ನು ಸುಲಿದುಕೊಂಡರೆ, ನೀನು ಯಾತಕ್ಕೆ ಇಷ್ಟು ಕಠಿನವಾಗಿ ಮಾತನಾಡಬೇಕು? ನೀವು ಯಾವಾಗಲೂ ಹಗೆಗಳೊಡನೆ ಸಮಾಧಾನಮಾಡಿಕೊಳ್ಳುವವರಲ್ಲವೆ; ಅದರಿಂದಲೇ ನಮ್ಮಲ್ಲಿ ದ್ವೇಷ. ಮಿತಿಮಿಾರಿ ಮಾತನಾಡಬಾರದು. ದುಡುಕಿ ನುಡಿದರೂ ಮರ್ಮೋದ್ಘಾಟನೆ ಮಾಡಬಾರದು. ನೀನು ಯಾತಕ್ಕೆ ನಮ್ಮ ಕಾಲಿಗೆ ತೊಡರಿಕೊಳ್ಳುತ್ತೀಯೆ? ಮನಸ್ಸಿಗೆ ಬಂದ ಹಾಗೆಲ್ಲಾ ಹರಟುತ್ತೀಯೆ? ನಮ್ಮನ್ನು ಸುಮ್ಮನೆ ಕೆಣಕಬೇಡ. ನಿನ್ನ ಸಂಗತಿಯನ್ನು ಬಲ್ಲೆವು. ಹೋಗು. ಹಿರಿಯರಲ್ಲಿ ಎಲ್ಲವನ್ನೂ ತಿಳಿ. ನಿನ್ನ ಹೆಸರನ್ನು ಉಳಿಸಿಕೊ. ಇತರರ ಗೊಡವೆಗೆ ಹೋಗಬೇಡ. ಈ ಕ್ರೂರವಾದ ಮಾತುಗಳನ್ನು ಬಿಡು. ನಮಗೆ ಯಾವದು ಒಳ್ಳೆಯದೆಂದು ನಿನ್ನನ್ನು ಕೇಳಲಿಲ್ಲ. ಸಾಕು, ಸಾಕು. ಇನ್ನು ನಮ್ಮನ್ನು ಕೆಣಕದಿರು. ತಾಳಿ ತಾಳಿ ನಮಗೂ ಸಾಕಾಯಿತು. ಇನ್ನು ಸಾಕು. ಎಲೋ, ವಿದುರ, ನಿನಗೆಲ್ಲಿಷ್ಟವೋ, ಅಲ್ಲಿಗೆ ತೊಲಗಿ ಹೋಗು. ಏನಾದರೂ ಸರಿ, ಬಾಲದ ಡೊಂಕು ಸರಿಯಾಗುವದೇ ಇಲ್ಲ." ಎಂದು ದುರ್ಯೋಧನನು ಹಲ್ಲುಗಡಿದನು.

ಆಮೇಲೆ ವಿದುರನು ಧೃತರಾಷ್ಟ್ರನನ್ನು ಕುರಿತು "ಎಲೈ ಧೃತರಾಷ್ಟ್ರನೇ, ಹಿತೋಕ್ತಿಯನ್ನು ಆಡಿದ ತಪ್ಪಿಗೆ ಸೇವಕನನ್ನು ಶಿಕ್ಷಿಸುವ ಅರಸನ ನಡತೆಯೆಂಥಾದ್ದೋ ನೀನೆ ತಿಳಿದು ನೋಡು. ಮುಖ್ಯವಾಗಿ ಏನು; ರಾಜರ ಚಿತ್ತ ಚಲಚಿತ್ತ. ಅಭಯಪ್ರದಾನಮಾಡಿದ ಉತ್ತರಕ್ಷಣದಲ್ಲಿಯೇ ಶಿರಶ್ಛೇದನವನ್ನು ಮಾಡಿಸುತ್ತಾರೆ. ಎಲೈ ರಾಜಪುತ್ರನೇ, ನೀನು ವಿವೇಕದಲ್ಲಿ ಪರಿಣತನೆಂದೂ, ನಾನು ಬಾಲಬುದ್ಧಿಯುವನೆಂದೂ ಹೇಳಿದೆ; ಚಿಂತೆಯಿಲ್ಲ. ಸ್ನೇಹಿತನೆಂದು ಪರಿಗ್ರಹಿಸಿ, ಬಳಿಕ ಅವನಲ್ಲಿ ತಪ್ಪು ಹಿಡಿಯುವವನೇ ಬಾಲಬುದ್ಧಿಯುವನೆಂದು ತಿಳಿ. ಹೃದಯಪರಿಪಾಕವಿಲ್ಲದವನನ್ನು ಸನ್ಮಾರ್ಗಕ್ಕೆ ತರುವದು ದುಷ್ಕರ. ನನ್ನ ಹಿತೋಕ್ತಿಗಳು ಹ್ಯಾಗೆತಾನೆ ನಿನಗೆ ರುಚಿಸುವವು. ಇನ್ನುಮೇಲೆ ಯಾವ

ವಿಷಯದಲ್ಲಾದರೂ ಇಷ್ಟವಾದ ಮಾತನ್ನು ಕೇಳಬೇಕಾದರೆ ಹೆಂಗಸರನ್ನೂ ಹುಚ್ಚರನ್ನೂ ಕೇಳು. 'ಹೌದು ಮಹಾಸ್ವಾಮಿ, ಹಾಗೆಯೇ ಸರಿ.' ಎನ್ನುವ ಪ್ರತಾರಣಶೀಲರು ಅನೇಕರುಂಟು. ರುಚಿಯಿಲ್ಲದಿದ್ದರೂ ಹಿತವಾಗಿರುವ ಮಾತುಗಳನ್ನಾಡುವವರೂ ದುರ್ಲಭ; ಕೇಳುವವರೂ ದುರ್ಲಭ. ಸ್ವಾಮಿಯ ಇಷ್ಟಾನಿಷ್ಟಗಳಿಗೆ ಹೆದರದೆ ಮುಂದಣ ಹಿತಾಹಿತವನ್ನು ನಿರ್ಭಯವಾಗಿ ಹೇಳುವ ಸೇವಕನೇ ಸೇವಕನು. ನನ್ನ ವಾಕ್ಕಷಾಯವನ್ನು ಕುಡಿ. ನಿನ್ನ ಈ ಜೂದಿನ ಪಿತ್ತ ವಡಗಲಿ. ಧೃತರಾಷ್ಟ್ರನ ಮಕ್ಕಳಿಗೆ ಐಶ್ವರ್ಯವೂ ಯಶಸ್ಸೂ ಬರಬೇಕೆಂಬುವದೇ ನನ್ನ ಹಾರೈಕೆ. ನಿನಗೆ ಯಾವದು ಬೇಕಾದರೂ ಬರಲಿ. ಇಗೋ, ಕೈಮುಗಿದೆನು. ಇಗೋ, ಇದೇ ನನ್ನ ಉಪದೇಶ. ದೃಷ್ಟಿಯಲ್ಲಿ ವಿಷವುಳ್ಳ ಹಾವುಗಳನ್ನು ಕೆಣಕಬಾರದು." ಎಂದು ಹೇಳಿ, ವಿದುರನು ಸುಮ್ಮನಾದನು.

ಇತ್ತ ಶಕುನಿಯು "ಓ ಧರ್ಮನಂದನಾ, ಪಾಂಡವರ ಆಸ್ತಿಯೆಲ್ಲವನ್ನೂ ಸೋತಿದೀಯೆ. ಇನ್ನೇನಾದರೂ ಸೋಲಬದ್ದು ಉಂಟೊ?" ಎನಲು;

ಧರ್ಮರಾಜನು "ನನ್ನಲ್ಲಿ ಕೋಟ್ಯನುಕೋಟಿ ದ್ರವ್ಯಗಳುಂಟು." ಎಂದನು.

ಅಷ್ಟರೊಳಗಾಗಿಯೆ ದಾಳವನ್ನು ಉರುಳಿಸಿ, "ಗೆದ್ದೆನು" ಎಂದು ಶಕುನಿಯು ಹೇಳಿದನು.

ಹೀಗೆಯೇ ಪಾಂಚಾಲದಿಂದ ಸಿಂಧುನದಿಯವರೆಗೂ ವ್ಯಾಪ್ತವಾದ ದೇಶಗಳನ್ನೂ, ಊರನ್ನೂ, ಪ್ರಜೆಗಳನ್ನೂ, ಸರ್ವಸಂಪತ್ತನ್ನೂ, ಆಶ್ರಿತ ರಾಜವರ್ಗವನ್ನೂ ಸೋತು, ತೃಪ್ತಿಯಾಗದೆ, ನಕುಲನನ್ನೂ, ಸಹದೇವನನ್ನೂ, ಕೂಡ ಸೋಲಲು;

ಶಕುನಿಯು "ನೀನು ಮಾದ್ರೀಪುತ್ರರನ್ನು ಮಾತ್ರ ಒಡ್ಡಿ ಸೋತೆ. ಭೀಮಾರ್ಜುನರು ಎಷ್ಟೇ ಆಗಲಿ, ನಿಮ್ಮಮ್ಮನ ಮಕ್ಕಳು!" ಎನಲು;

"ಛೆ! ಛೆ! ನಮ್ಮಲ್ಲಿ ಕಲಹವನ್ನು ಎಬ್ಬಿಸಲು ಹೀಗಾಡುತ್ತೀಯೆ!" ಎಂದು ಹೀಯಾಳಿಸಲು;

ಧರ್ಮರಾಜನನ್ನು ನೋಡಿ "ಮದ್ಯಪಾನಮಾಡಿದವನು ಕಣ್ಣು ತಿಳಿಯದೆ ಮನಸ್ಸಿಗೆ ಗಳಹುವಹಾಗೆ ಹಿಂದುಮುಂದರಿಯದೆ ನಾನೂ ಹೇಳಿದೆನು. ಮನ್ನಿಸು." ಎಂದನು.

" ಇಗೋ, ಫಲ್ಗುಣನನ್ನು ಒಡ್ಡಿರುವೆನು. " ಎನಲು ;

" ಓಹೋ, ಗೆದ್ದೆನು, ಗೆದ್ದೆನು. " ಎಂದನು.

" ನನ್ನ ಸಕಲೈಶ್ವರ್ಯವೂ ಇದೂ ಒಂದೆ. ಈ ಸಹೋದರರತ್ನವನ್ನು ಒಡ್ಡಿದೆನು. " ಎನಲು;

" ಭೀಮಸೇನನನ್ನೂ ಕೈಗೆ ಹಾಕಿಕೊಂಡೆನು. ಮತ್ತೇನು, ಮತ್ತೇನು, ಒಡ್ಡೊಡ್ಡು. " ಎಂದನು.

" ನಾನೊಬ್ಬನೇ ಉಳಿದಿರುವೆನು. " ಎನಲು ;

" ನಿನ್ನನ್ನೂ ಗೆದ್ದೆನು. ಹೋಗು. ಆಹಾ! ನಿನಗೆ ಇನ್ನೂ ಐಶ್ವರ್ಯವಿದ್ದಾಗಲೆ ನಿನ್ನನ್ನೇ ಒಡ್ಡಿದ್ದು ಮಹಾದೋಷ. ನಿನಗೆ ಇಷ್ಟಳಾದ ದ್ರೌಪದಿಯಿರುವಳು. ಅವಳನ್ನು ಒಡ್ಡಿ ಎಲ್ಲವನ್ನೂ ಗೆದ್ದುಕೊ. " ಎನಲು;

" ಹಾಗಾದರೆ, ನನ್ನ ಪ್ರಾಣಪ್ರಿಯಳಾದ ಪಾಂಚಾಲರಾಜಪುತ್ರಿಯನ್ನು ಒಡ್ಡಿದೆನು. " ಎಂದನು.

" ಛೆ! ಛೆ! ಏನನ್ಯಾಯ! ಏನನ್ಯಾಯ! " ಎಂಬ ಮಾತು ನಾಲ್ಕು ಕಡೆಯಲ್ಲಿಯೂ ಎದ್ದಿತು. ದ್ರೋಣಕೃಪಾಶ್ವತ್ಥಾಮರೆಲ್ಲಾ ಬೆವತು ಹೋದರು. ವಿದುರನು ಮರುಳಾಗಿ ತಲೆಯ ಮೇಲೆ ಕೈಯಿಟ್ಟುಕೊಂಡನು. ಜನಗಳಿಗೆಲ್ಲಾ ಉಬ್ಬಸವು ಹೆಚ್ಚಿತು. " ಗೆದ್ದೆಯಾ, ಜಯಿಸಿದೆಯಾ, ಏನಾಯಿತು, ಏನಾಯಿತು. " ಎಂಬದಾಗಿ ಧೃತರಾಷ್ಟ್ರನು ಕೂಗಿಕೊಂಡನು. " ಹಹ, ಹಾ " ಎಂದು ಕರ್ಣಾದಿಗಳು ಘಟ್ಟಿಯಾಗಿ ಗಹಗಹಿಸಿ ನಕ್ಕರು. ಉಳಿದವರು ಮೌನವಾಗಿ ಕಣ್ಣೀರನ್ನು ಸುರಿಸಿದರು.

" ಇಗೋ, ಗೆದ್ದೆನು, ಗೆದ್ದೆನು. " ಎಂಬದಾಗಿ ಶಕುನಿಯು ದಾಳವನ್ನು ಕೈಗೆ ತೆಗೆದುಕೊಂಡು ನೇತ್ರವನ್ನು ಉರಿಳಿಸಿದನು.

" ಓ ಕ್ಷತ್ತಾ, ಪಾಂಡವರ ಮೋಹದ ರಾಣಿಯನ್ನು ಎಳೆದುಕೊಂಡು ಬಾ. ನಮ್ಮ ಅರಮನೆಯನ್ನು ಗುಡಿಸಲಿ. ನಮ್ಮ ತೊತ್ತಿರೊಂದಿಗೆ ತೊತ್ತಾಗಿರಲಿ. " ಎಂದು ಕೂಗಿದ ದುರ್ಯೋಧನನ ಮಾತು ಕಿವಿಯನ್ನು ಅಯಶ್ಶಲಾಕೆಯಂತೆ ತಿವಿಯಲು; ವಿದುರನು ಕುಪಿತನಾಗಿ,

"ಎಲಾ ನೀಚಾ, ಈ ರೀತಿ ಬೊಗಳುವಾಗಲೆ ಕಾಲಪಾಶದಲ್ಲಿ ಕತ್ತನ್ನು ಸಿಕ್ಕಿಸಿಕೊಳ್ಳುವದು ನಿನಗೆ ತಿಳಿಯದೆ? ಹುಲ್ಲೆಯಾದ ನೀನು ಹುಲಿಗಳನ್ನು ಯಾತಕ್ಕೆ ಕೆಣಕುತ್ತೀಯೆ? ಘಟಸರ್ಪಗಳು ನಿನ್ನ ತಲೆಯ ಮೇಲೆ ಆಡುತ್ತಿರುವವು. ಪಾಂಡವರಲ್ಲಿ ಹಗೆ ಬಳೆಯಿಸಿ ಯಮನ ಮನೆಗೆ ಯಾತಕ್ಕೆ ತೊಲಗುತ್ತೀಯೆ? ದ್ರೌಪದಿಯನ್ನು ಸೋಲುವದಕ್ಕೆ ಧರ್ಮನಂದನನಿಗೆ ಅಧಿಕಾರವೇ ಇಲ್ಲ. ಹೀಗಿರುವಲ್ಲಿ ನೀನು ಅವಳನ್ನು ಎಳೆತರಿಸುವದಕ್ಕೆ ಕಾರಣವೇನು? ದ್ಯೂತದಿಂದ ಹಣವನ್ನು ಆರ್ಜಿಸುವ ಧೃತರಾಷ್ಟ್ರನು ಮರಣಕಾಲಕ್ಕೆ ಪುಷ್ಪಿಸುವ ಬಿದಿರ ಮೆಳೆಯಂತಾದನು. ಜೂದಿನಿಂದ ಮತ್ತನಾಗಿ ಕುರುಡನಾಗಿರುವನು. ಯಾರೇ ಆಗಲಿ, ಕ್ರೂರವಾದ ಮಾತುಗಳಿಂದ ಪರರ ಮನಸ್ಸನ್ನು ನೋಯಿಸಬಾರದು. ಜೂದಿನಿಂದಲೂ, ಪಗಡೆಯ ಆಟದಿಂದಲೂ ಹಗೆಗಳನ್ನು ಸೋಲಿಸಬಾರದು. ಒಬ್ಬನು ಕ್ರೂರವಾಗಿ ನುಡಿಯುತ್ತಾನೆ; ಅದರ ನೋವಿಗೆ ಇನ್ನೊಬ್ಬನು ಹಗಲೂ ಇರುಳೂ ಕುದಿಯುತ್ತಾನೆ; ಇದು ಮತ್ತೊಬ್ಬನ ಹೃದಯವನ್ನೇ ಸೀಳಿಬಿಡುತ್ತದೆ. ಒಂದು ಕಾಲದಲ್ಲಿ ಒಂದು ಆಡು ಗಾಳವನ್ನು ನುಂಗಿತಂತೆ. ಅದನ್ನು ತೆಗೆಯುವಾಗ ಬೇಡನು ಅದರ ಗಂಟಲನ್ನೇ ಹರಿದುಬಿಟ್ಟನೆಂದು ಒಂದು ಇತಿಹಾಸವುಂಟು. ದುರ್ಯೋಧನಾ, ಪಾಂಡವರ ಐಶ್ವರ್ಯವನ್ನು ನುಂಗದಿರು. ಅವರಲ್ಲಿ ವಿರೋಧವನ್ನು ಕಟ್ಟಿಕೊಳ್ಳಬೇಡ. ಪಾಂಡವರು ಯಾವಾಗಲೂ ದುಡುಕಿ ಮಾತಾಡುವದಿಲ್ಲ. ನಾಯಿಗಳೇಗ ಯಾವಾಗಲೂ ಬಗುಳುವವು. ಮೋಸವು ನರಕಕ್ಕೆ ಬಾಗಿಲೆಂದು ನಿನಗೆ ಗೊತ್ತಿಲ್ಲವೆ? ಬೆಂಡು ಮುಳುಗಿ ಗುಂಡುಕಲ್ಲು ತೇಲಿದರೂ ಸರಿಯೆ, ದುರ್ಯೋಧನನು ನನ್ನ ಮಾತನ್ನು ಬಗೆಯುವದಿಲ್ಲ. ಹಿತೈಷಿಗಳ ಮಾತನ್ನು ಕೇಳದೆ ದುರ್ಮಾರ್ಗಪ್ರವರ್ತನೆಯೇ ಪ್ರಬಲವಾದರೆ, ಹಾನಿಯು ಕೈಯೊಡನೆ ಪ್ರಾಪ್ತವಾಗುವದರಲ್ಲಿ ಸಂಶಯವೇನು?" ಎಂದನು.

"ಛೀ! ಛೀ! ಕ್ಷತ್ತಾ, ಛೆ! ಹೋಗು. ಪ್ರಾತಿಕಾಮಿ! ನೀನು ಹೋಗಿ, ದ್ರೌಪದಿಯನ್ನು ಎಳೆದುಕೊಂಡು ಬಾ. ಪಾಂಡವರಿಂದ ಯಾವ ಭಯವೂ ಇಲ್ಲ. ವಿದುರನೀಗ ಒದರಿಕೊಳ್ಳುವನು." ಎಂದು ದುರ್ಯೋಧನನು ಸಭೆಯಲ್ಲಿ ಕೂಗಿ ಹೇಳಿದನು.

ಪ್ರಾತಿಕಾಮಿಯು ಜಾಗ್ರತೆಯಾಗಿ ಪಾಂಡವರು ಇಳಿದುಕೊಂಡಿದ್ದ ಅರಮನೆಗೆ ಹೋಗಿ, ಯಾಜ್ಞಸೇನಿಯನ್ನು ಕಂಡು;

"ಎಲೌ, ಯಾಜ್ಞಸೇನಿ, ಯುಧಿಷ್ಠಿರನು ವೈಮರೆತು ನಿನ್ನನ್ನು ಜೂದಿನಲ್ಲಿ ಸೋತನು. ನೀನು ಧೃತರಾಷ್ಟ್ರನ ಅರಮನೆಯ ಊಳಿಗಕ್ಕೆ ಬರಬೇಕೆಂದು ಹೇಳಿದರು; ಹೊರಡು." ಎಂದನು.

"ಏನು ಹೇಳಿದೆ? ತನ್ನ ಹೆಂಡತಿಯನ್ನೂ ಒಡ್ಡಿ ಆಡುವ ಆಟಗಾರನೂ ಉಂಟೆ! ಅರಸನು ಮತ್ತನಾಗಿಯೇ ಇದ್ದಿರಬೇಕು. ಒಡ್ಡುವದಕ್ಕೆ ಬೇರೆ ಯಾವದೂ ಇರಲಿಲ್ಲವೆ?" ಎಂದು ದ್ರೌಪದಿಯು ಹೇಳಿದಳು.

"ಅಮ್ಮಾ, ಎಲ್ಲವನ್ನೂ ಸೋತು ತನ್ನನ್ನೂ ಸೋತಬಳಿಕ ನಿನ್ನನ್ನು ಒಡ್ಡಿದನು." ಎನಲು;

"ಹಾಗಾದರೆ, ನೀನು ಅಲ್ಲಿಗೆ ಹೋಗಿ, ನನ್ನನ್ನು ಮುಂಚೆ ಸೋತನೋ, ತನ್ನನ್ನು ಮುಂಚೆ ಸೋತನೋ, ತಿಳಿದುಕೊಂಡು ಬಾ. ಆ ಮೇಲೆ ನಾನು ನಿನ್ನೊಡನೆ ಅಲ್ಲಿಗೆ ಬರುವೆನು." ಎಂದಳು.

ಪ್ರಾತಿಕಾಮಿಯು ಸಭೆಗೆ ಬಂದು "ಎಲೈ ಧರ್ಮಪುತ್ರನೇ, ದ್ರೌಪದೀದೇವಿಯು ಒಂದು ಮಾತನ್ನು ಕೇಳಿಕೊಂಡು ಬರಹೇಳಿರುವಳು. ತನ್ನನ್ನು ಸೋಲುವಾಗ ನೀನು ಯಾರ ಸ್ವಾಮಿಯಾಗಿದ್ದೆ? ನೀನು ಮುಂಚೆ ಯಾರನ್ನು ಸೋತೆ; ನಿನ್ನನ್ನೋ, ತನ್ನನ್ನೋ? ಎಂದು ಕೇಳಿಕೊಂಡು ಬರಹೇಳಿರುವಳು." ಎಂದನು.

ಅದಕ್ಕೆ ಯಾವ ಪ್ರತ್ಯುತ್ತರವನ್ನೂ ಕೊಡದೆ ಮರುಳಾದವನಂತೆಯೂ, ಮೂಗುಹಿಡಿದವನಂತೆಯೂ ಸುಮ್ಮನೆ ಯುಧಿಷ್ಠಿರನು ಕುಳಿತಿರಲು; "ಪಾಂಚಾಲ ರಾಜಪುತ್ರಿಯೇ ಬಂದು ಈ ಸಭೆಯಲ್ಲಿ ತನ್ನ ಪತಿಯನ್ನು ಕೇಳಲಿ. ಹಿಡಿದುಕೊಂಡು ಬಾ." ಎಂದು ದುರ್ಯೋಧನನು ಕೂಗಿದನು.

ಯುವರಾಜನ ಆಜ್ಞಾನುಸಾರವಾಗಿ ದ್ರೌಪದೀದೇವಿಯ ಬಳಿಗೆ ಹೋಗಿ, ಪ್ರಾತಿಕಾಮಿಯು "ಅಮ್ಮಾ, ನೀನು ಸಭೆಗೆ ಬರಬೇಕಂತೆ. ಅಲ್ಲಿ ಎಲ್ಲರ ಇದಿರಿಗೂ ಪ್ರತ್ಯುತ್ತರವನ್ನು ಹೇಳುವರಂತೆ." ಎಂದನು.

" ಏನು? ಇದು ಇಷ್ಟಕ್ಕೆ ಬಂತೇ? ಭಗವಂತನು ನಡಿಸಿದಂತಾಗಲಿ! ನಾವು ಮಾಡುವದೇನಿರುವದು? ಸುಖದುಃಖಗಳೆರಡೂ ಪ್ರಾಣಿಗಳಿಗೆ ಸಹಜವಾದವು. ಆದರೆ ಲೋಕದಲ್ಲಿ ಸುಶೀಲವೇ ಎಲ್ಲಕ್ಕಿಂತಲೂ ಮೇಲೆನ್ನುವರು. ನೀನು ಆ ಸಭೆಯಲ್ಲಿ ಈ ನನ್ನ ಮಾತನ್ನು ಹೇಳು. ಅಲ್ಲಿ ನೆರೆದಿರುವ ಹಿರಿಯರೂ ಧಾರ್ಮಿಕರೂ ಹ್ಯಾಗೆ ಹೇಳುವರೋ, ಹಾಗೆ ನಡೆದುಕೊಳ್ಳುತ್ತೇನೆ." ಎಂದಳು.

" ಹಾಗೆಯೇ ಆಗಲಿ." ಎಂದು ಪ್ರಾತಿಕಾಮಿಯು ಮರಳಿ ಬಂದು ಈ ಸಂಗತಿಯನ್ನು ಹೇಳಲು; ಯಾವ ಪ್ರತ್ಯುತ್ತರವನ್ನೂ ಕೊಡದೆ ಸಭೆಯವರೆಲ್ಲರೂ ತಲೆಯನ್ನು ಬಗ್ಗಿಸಿಕೊಂಡು ಮೌನದಿಂದ ಕುಳಿತಿದ್ದರು.

ಈ ಮಧ್ಯದಲ್ಲಿ ಯುಧಿಷ್ಠಿರನು ಆಪ್ತನಾದ ಸೇವಕನೊಬ್ಬನನ್ನು ಕರೆದು "ದ್ರೌಪದಿಯು ಋತುಮತಿಯಾಗಿ ಏಕವಸ್ತ್ರವನ್ನು ಧರಿಸಿದ್ದರೂ, ತನ್ನ ಮಾವನ ಇದಿರಿಗೆ ಬರಬೇಕೆಂದು ತಿಳುಹು." ಎನಲು; ಅವನು ಹಾಗೆಯೇ ಮಾಡಿದನು.

ಇತ್ತ, ದುರ್ಯೋಧನನು ಸೂತನನ್ನು ಕುರಿತು " ಅವಳನ್ನು ಇಲ್ಲಿಗೆ ಹಿಡಿದುಕೊಂಡು ಬಾ. ಕೌರವರು ಅವಳಿಗೆ ಪ್ರತ್ಯುತ್ತರವನ್ನು ಕೊಡುವರು." ಎನಲು; ಸ್ವಲ್ಪಭೀತನಾದ ಸೂತನು " ನಾನು ಏನು ಹೇಳಲಿ?" ಎಂದು ಮರಳಿ ಕೇಳಿದ್ದಕ್ಕೆ " ಈ ಮೂಢಸೂತನು ವೃಕೋದರನಿಗೆ ಹೆದರಿಕೊಂಡಿರುವಂತಿದೆ. ದುಶ್ಶಾಸನಾ, ನೀನೇ ಹೋಗಿ ಅವಳನ್ನು ಮುಂದಲೆಹಿಡಿದು ಎಳೆದುಕೊಂಡು ಬಾ. ನಮ್ಮ ಶತ್ರುಗಳು ನಮ್ಮ ಅಜ್ಞಾನುವರ್ತಿಗಳಾಗಿರುವರು. ಅವರೇನು ಮಾಡಬಲ್ಲರು?" ಎಂದನು.

ಅಣ್ಣನು ಹೇಳಿದ ಕೂಡಲೆ ದುಶ್ಶಾಸನನು ಎದ್ದು ಹೋಟು ಪಾಂಡವರಿದ ಮನೆಯನ್ನು ಹೊಕ್ಕು, " ಪಾಂಚಾಲರಾಜಪುತ್ರಿ, ಕೃಷ್ಣೆ, ಬಾ, ಬಾ, ನಿನ್ನನ್ನು ನ್ಯಾಯವಾಗಿಯೇ ಗೆದ್ದಿದೇವೆ. ನಿನ್ನ ಲಜ್ಜೆಗಿಜ್ಜೆಯನ್ನು ಬಿಡು. ದುರ್ಯೋಧನನನ್ನು ನೋಡು ಬಾ. ಬಾ, ಬಾ. ನಿನಗೆ ಇನ್ನುಮೇಲೆ ಕೌರವರೇ ಸ್ವಾಮಿಗಳು. ನೀನು ಸಭೆಗೆ ಬಾ. ನಿನ್ನನ್ನು ನ್ಯಾಯವಾಗಿ ಗೆದ್ದಿರುವೆವು." ಎನಲು;

ಅತ್ಯಂತ ದುಃಖಾರ್ತಳಾದ ದ್ರೌಪದೀದೇವಿಯು ಝುಗ್ಗನೆದ್ದು, ಅರಮನೆಯ ರಾಣೀವಾಸಕ್ಕೆ ಓಡಿಹೋದಳು.

ಕೋಪಾರುಣನೇತ್ರನಾದ ದುಶ್ಶಾಸನನು ಬೆನ್ನಟ್ಟಿ ಹೋಗಿ, ಅನಾಥಳನ್ನೆಳೆಯುವಂತೆ ಅವಳ ದೀರ್ಘವಾದ ಕೇಶಪಾಶವನ್ನು ಹಿಡಿದು ಸೆಳೆದು ಸಭೆಗೆ ತರುತ್ತಿದ್ದನು.

ಆಗ " ಎಲಾ ನೀಚಾ, ನನ್ನನ್ನು ಸಭೆಗೆ ಎಳೆದುಕೊಂಡು ಹೋಗುವದು ಅನುಚಿತ. ನಾನು ಋತುಮತಿಯಾಗಿದೇನೆ. ಒಂದೇ ವಸ್ತ್ರವನ್ನು ಧರಿಸಿದೇನೆ. " ಎಂದು ನುಡಿಯುತ್ತಿದ್ದಳು.

ಅವಳ ಮಾತನ್ನು ಬಗೆಯದೆ, ಅವಳ ದುಃಖಕ್ಕೆ ಎದೆಗರಗದೆ, " ನೀನು ಋತುಮತಿಯಾಗಿದ್ದರೇನು, ಇಲ್ಲದಿದ್ದರೇನ? ನೀನು ಒಂದೇ ವಸ್ತ್ರವನ್ನು ಉಟ್ಟಿದ್ದರೇನು, ಉಟ್ಟಿಲ್ಲದೆ ಬೆತ್ತಲೆ ಇದ್ದರೇನು ? ದ್ಯೂತದಲ್ಲಿ ನಿನ್ನನ್ನು ಜಯಿಸಿದ ಬಳಿಕ ನಮ್ಮ ಗೌಡಿಗಳೊಂದಿಗೆ ನೀನೂ ಇರತಕ್ಕವಳು. " ಎಂದು ಕೇಶಪಾಶವನ್ನು ಹಿಡಿದು ಸಭೆಗೆ ಎಳೆದುಕೊಂಡು ಹೋಗುತ್ತಿದ್ದನು.

ಅದನ್ನು ನೋಡಿ " ಅಯ್ಯೋ! ರಾಜಸೂಯಯಾಗದಲ್ಲಿ ಮಂತ್ರೋದಕದಿಂದ ಪೂತವಾದ ಈ ಕೇಶಪಾಶವನ್ನು ದುಶ್ಶಾಸನನು ಎಳೆಯುವಂತಾಯಿತೇ! ಮೂರು ಲೋಕವನ್ನು ಕಾಪಾಡುವ ತ್ರಾಣವುಳ್ಳ ಐವರು ಪತಿಗಳಿದ್ದರೂ, ದ್ರೌಪದಿಗೆ ರಕ್ಷಕರಿಲ್ಲದೇ ಹೋದರೇ! " ಕೊನೆಗೆ ಇವರ ವಂಚನೋಪಾಯವೇ ಫಲಿಸಿತೇ! ಅವರ ಧರ್ಮವು ಪಾಂಡವರ ತಲೆಗಾಯದೇ ಹೋಯಿತೇ! ಬಂಧುಜನಗಳೆಂಬ ಗೌರವವೂ ಅಡಗಿ ಹೋಯಿತೇ! ಸ್ತ್ರೀಯೆಂಬ ಕನಿಕರವೂ ತಲೆದೋರದೆ ಹೋಯಿತೇ! ಅಯ್ಯೋ, ಋತುಮತಿಯನ್ನು ಈ ರೀತಿಯಲ್ಲಿ ಎಳೆದುಕೊಂಡು ಹೋಗಬಹುದೇ! ಇವನ ಕಲ್ಲೆದೆಯು ಸೀಳಿ ಹೋಗಬಾರದೇ! ಇವನ ಕೈಯು ಬೆಂದು ಹೋಗಬಾರದೇ! " ಎಂದು ಕೆಲವರೂ; " ಅಮ್ಮಾ, ದ್ರೌಪದೀ, ನಿನ್ನ ಈ ದುರವಸ್ಥೆಯನ್ನು ನೋಡುವ ನಮ್ಮ ಕಣ್ಣುಗಳು ಯಾತಕ್ಕೆ ಒಡೆದು ಹೋಗುವದಿಲ್ಲ? " ಎಂಬದಾಗಿ ಕೆಲವರೂ; " ಇದು ಅನ್ಯಾಯ, ಇದು ಅಧರ್ಮ, ಕೇವಲರಿಗೂಕೂಡ ಅವಿಹಿತವಾದ್ದು,

ರಾಜರಲ್ಲಿಯೇ ಈ ದುಷ್ಪ್ರವರ್ತನೆಯಾದಲ್ಲಿ 'ದುರ್ಬಲಸ್ಯ ಬಲೋ ರಾಜಾ' ಎಂಬ ವಾಕ್ಯವನ್ನು ಸುಡಬೇಕು. ಹೊಲವೇ ಗದ್ದೆಯನ್ನು ತಿಂದು ಮೇದರೆ, ತಡೆಯುವವರು ಯಾರು?" ಎಂಬದಾಗಿ, ಸ್ತ್ರೀಬಾಲವೃದ್ಧರೂ ಶೋಕದಿಂದ ನಾನಾವಿಧವಾಗಿ ಗೋಳಾಡುತ್ತಿದ್ದರು.

ಆದರೂ ಸ್ವಲ್ಪವೂ ಅಳುಕದೆ, ಇತರರ ಮಾನಭಂಗವೇ ಪುರುಷಾರ್ಥವೆಂದೂ, ಇತರರ ದುಃಖವೇ ತನ್ನ ಸೌಖ್ಯವೆಂದೂ ಭಾವಿಸುತ್ತಿದ್ದ ಆ ಪುರುಷಾಕಾರಿಯಾದ ಮಾರಿಯು ರಾಜಶ್ರೇಷ್ಠನಾದ ಯಮನಂದನನ ಧರ್ಮಪತ್ನಿಯನ್ನೂ ಸಾಮಾನ್ಯಸ್ತ್ರೀಯಂತೆ ರಾಜವೀಧಿಯಲ್ಲಿ ದರದರನೆ ಎಳೆದುಕೊಂಡು ಹೋಗಿ, ಆ ದ್ಯೂತ ಗೃಹವನ್ನು ಹೊಕ್ಕನು.

ತಲೆಯಲ್ಲಾ ಕೆದರಿಹೋಗಿ, ಸೆರಗು ಜಾರಿಹೋಗಿ ಇದ್ದರೂ, ಎಳೆಯಲ್ಪಡುತ್ತಿದ್ದ ದ್ರೌಪದೀದೇವಿಯು ಮಾನಭಂಗದಿಂದುಂಟಾದ ಅತಿದುಃಖದಿಂದ, "ಈ ಸಭೆಯಲ್ಲಿ ಶಾಸ್ತ್ರಜ್ಞರೂ, ಧರ್ಮವಿದರೂ, ವ್ರತಿಗಳೂ, ಪೂಜ್ಯರೂ ನೆರೆದಿರುವರು. ನಾನು ಅವರಿದಿರಿಗೆ ಹೀಗೆ ನಿಲ್ಲರಾರೆನು. ನೀಚನೇ, ಕ್ರೂರಿಯೇ, ನನ್ನನ್ನು ಹೀಗೆ ಎಳೆಯಬೇಡ. ನನ್ನ ಮೈಮೇಲಿನ ಸೆರಗನ್ನು ತೆಗೆಯಬೇಡ. ಇಂದ್ರನೇ ನಿನ್ನ ಸಹಾಯಕ್ಕೆ ಬಂದರೂ, ನನ್ನ ಪತಿಗಳು ನಿನ್ನನ್ನು ಸುಮ್ಮನೆ ಬಿಡರು. ಯುಧಿಷ್ಠಿರನು ಧರ್ಮಮಾರ್ಗಕ್ಕೆ ಕಟ್ಟುಬಿದ್ದಿರುವನು. ಧರ್ಮಮಾರ್ಗವು ಮಹಾಸೂಕ್ಷ್ಮವಾದದ್ದು. ದಿವ್ಯಜ್ಞಾನಿಗಳು ಅದನ್ನು ತಿಳಿಯುವರು. ನನ್ನ ಪತಿಯ ಸದ್ಗುಣಗಳನ್ನು ಮರೆತು, ದೋಷಲವವನ್ನೂ ಎಣಿಸಲಾರೆನು. ಋತುಮತಿಯಾದ ನನ್ನನ್ನು ಕುರುವೀರರ ಇದಿರಿಗೆ ಎಳೆದುಕೊಂಡು ಹೋಗಬೇಡ. ಇದು ಪರಮಾನ್ಯಾಯವು. ಆದರೂ ನಿನ್ನನ್ನು ಧಿಕ್ಕರಿಸುವವರು ಯಾರೂ ಇಲ್ಲ. ನಿಜವಾಗಿಯೂ ಇವರೂ ನಿನ್ನಂತೆಯೇ ಇರುವಂತಿದೆ. ಛೀ, ಖಂಡಿತವಾಗಿಯೂ ಭಾರತರ ನೀತಿಯು ತೊಲಗಿಹೋಯಿತು; ಕ್ಷತ್ರಿಯ ಧರ್ಮವು ಮಾಯವಾಯಿತು; ಇಲ್ಲದಿದ್ದರೆ ಇಲ್ಲಿರುವ ಕ್ಷತ್ರಿಯರೆಲ್ಲರೂ ಮೂಗರಂತೆ ಹೀಗಿರುವರೇ? ಅಯ್ಯೋ, ಭೀಷ್ಮದ್ರೋಣರ ತ್ರಾಣವೂ ಇಂಗಿಹೋಯಿತೇ! ಕ್ಷತ್ರಧರ್ಮವು ಬೆಂದು ಹೋಯಿತೇ! ರಾಜನ ವಿವೇಕವು

ಬೂದಿಯಾಗಿ ಹೋಯಿತೇ? ಯಾತಕ್ಕೆ ಈ ಅಕೃತ್ಯಕ್ಕೆ ಇವರೆಲ್ಲರೂ ಒಡಂಬಟ್ಟಿರುವರು?" ಎಂಬದಾಗಿ ಪ್ರಳಾಪಿಸುತ್ತಿದ್ದಳು.

ಪತ್ನಿಯ ಮಾನಭಂಗವನ್ನು ನೋಡಿ, ಕೋಪವು ಹೊಗೆಯುತ್ತಿದ್ದಾಗ್ಯೂ, ಅಣ್ಣನ ಕಣ್ಣ ನೋಟಕ್ಕೆ ಹೆದರಿ, ಭೀಮಾದಿಗಳು ಒಳಗೊಳಗೆ ಕುದಿಯುತ್ತಿದ್ದರು. ಅವರ ಅಂತಸ್ತಾಪವನ್ನೂ, ದ್ರೌಪದಿಯ ವಿಷಾದವನ್ನೂ ನೋಡಿ, ಕನಿಕರವೆಳ್ಳಷ್ಟಾದರೂ ಇಲ್ಲದೆ, ದುರ್ಯೋಧನಕರ್ಣಶಕುನಿಗಳು ಘೊಳ್ಳೆಂದು ನಕ್ಕರು. ಇತರರೆಲ್ಲರೂ ನಿಶ್ಶಬ್ದವಾಗಿ ಕಣ್ಣೀರನ್ನು ಸುರಿಸುತ್ತಿದ್ದರು.

ಆಗ ಭೀಷ್ಮನಿಂತೆಂದನು:-"ಎಲೌ ವತ್ಸೆ, ಧರ್ಮವು ಸೂಕ್ಷ್ಮವಾದದ್ದು. ಆದಕಾರಣದಿಂದಲೇ ನಾನು ಇದರ ಇತ್ಯರ್ಥವನ್ನು ಹೇಳಲಾರೆನು. ಇತರರ ದ್ರವ್ಯವನ್ನು ತಾನು ಸೋಲಲಾರನು. ಆದರೆ ಯಾವಾಗಲೂ ಪತ್ನಿಯರು ಪತಿಯ ಪದಾರ್ಥವೆನ್ನಿಸಿಕೊಳ್ಳುವರು. ಧರ್ಮನಂದನನು ತನ್ನ ಐಶ್ವರ್ಯವನ್ನೆಲ್ಲವನ್ನಾದರೂ ಬಿಡುವನಲ್ಲದೆ ತನ್ನ ಸತ್ಯವನ್ನೆಂದಿಗೂ ದಾಟಲೊಲ್ಲನು? ಆತನೇ ಸೋತದ್ದನ್ನು ಒಪ್ಪಿಕೊಂಡಿರುವನು. ಆದಕಾರಣದಿಂದಲೇ ಈ ಧರ್ಮಸೂಕ್ಷ್ಮವನ್ನು ತಿಳಿದು ಹೇಳಲಾರೆನು."

"ಜೂದಿನಿಂದ ಜಯಿಸಬೇಕೆಂಬ ದುರ್ಭಾವದಿಂದಲೇ ಧರ್ಮಾತ್ಮರಾದ ನನ್ನ ಪತಿಗಳನ್ನು ಕುಟಿಲಮತಿಗಳಾದ ಇವರು ಮೋಸಗೊಳಿಸಿದರು. ಈ ಸಭೆಯಲ್ಲಿ ನಮಗೆಲ್ಲಾ ಸ್ವಾಮಿಗಳಾದ ಕೌರವರಿರುವರು. ಅವರೇ ಪರ್ಯಾಲೋಚಿಸಿ ನನಗೆ ಪ್ರತ್ಯುತ್ತರವನ್ನು ಕೊಡಲಿ." ಎಂದು ದ್ರುಪದನಂದನೆಯು ಹೇಳಿದ ಮಾತನ್ನು ದುರ್ಯೋಧನನು ಅಣಕಿಸುತ್ತಾ ದುರ್ವಾಕ್ಯಗಳನ್ನಾಡಲಾರಂಭಿಸಿದರು.

ಈ ಮಾತುಗಳನ್ನು ಕೇಳಲು, ಹೊಗೆಯುತ್ತಿದ್ದ ಬೆಂಕಿಯು ಭಗ್ಗನೆ ಉರಿದೆದ್ದು ಗಗನವನ್ನು ನಿಲುಕುವಂತೆ, ದುಸ್ಸಹರೋಷದಿಂದ ಉರಿದುರಿದು ಭೀಮಸೇನನು ಅಣ್ಣನ ಮುಖವನ್ನು ದುರುದುರನೆ ನೋಡುತ್ತಾ ಇಂತೆಂದನು:-"ಓ ಯುಧಿಷ್ಠಿರಾ, ಜೂದಾಳಿಗಳ ಮನೆಯಲ್ಲಿ ಸೂಳೆಯರುಂಟು. ಅವರೂ ಕೂಡ ತಮ್ಮ ಸೂಳೆಯರನ್ನು ಈ ರೀತಿಯಲ್ಲಿ ಒಡ್ಡುವದಿಲ್ಲ. ಅವರಲ್ಲಿಯೂ ಸ್ವಲ್ಪ ದಯೆಯುಂಟು. ನೀನು ಕಾಶಿರಾಜನು ಕೊಟ್ಟ ಸಮಸ್ತವನ್ನೂ ಸೋತಾ

ಗಲೂ ನನ್ನ ಮನಸ್ಸು ನೋಯಲಿಲ್ಲ. ನಿನ್ನಲ್ಲಿ ಅಗ್ರಜನೆಂಬ ಗೌರವವಿತ್ತು. ನಮ್ಮನ್ನೂ ನಿನ್ನನ್ನೂ ಸೋತದ್ದಕ್ಕೂ ನಾನು ಚಿಂತಿಸಲಿಲ್ಲ. ನಿರಪರಾಧಿಯಾದ ಈ ರಾಜಪುತ್ರಿಯು ನಿನಗೋಸ್ಕರಲೇ ಈ ರೀತಿಯಲ್ಲಿ ಶ್ರಮಪಡಬೇಕಾಯಿತು. ಈ ನಾಯಿಗಳೆಲ್ಲಾ ಅವಳನ್ನು ಮುಟ್ಟುವಂತಾಯಿತು. ಇಂಥಾ ಕ್ರೂರಕೃತ್ಯ ವನ್ನು ನಡೆಯಿಸಿದ ನಿನ್ನ ಕೈಗಳೆರಡನ್ನೂ ಈಗಲೇ ಸುಟ್ಟುಬಿಡುವೆನು. ಸಹದೇವ, ಬೆಂಕಿಯನ್ನು ತೆಗೆದುಕೊಂಡು ಬಾ." ಎಂದು ಸಿಡಿದೆದ್ದನು.

ಎದ್ದು ನಿಂತ ಭೀಮಸೇನನ ನಡುಗುವ ಕೈಗಳನ್ನು ಹಿಡಿದುಕೊಂಡು ಅರ್ಜುನನು ಇಂತೆದನು:—"ಅಣ್ಣಾ, ಇದೇನು ಮಾತುಗಳನ್ನಾಡಿದಿರಿ! ಹಿರಿಯರು ಹೀಗೆ ದುಡುಕುವರೆ? ನನ್ನ ಮಾತುಗಳನ್ನು ಲಾಲಿಸಬೇಕು. ತಾವು ಉದ್ಯೋಗಿಸಿದ ಕಾರ್ಯದಿಂದ ಶತ್ರುಗಳ ಇಷ್ಟಾರ್ಥವನ್ನು ನೆರವೇರಿಸಿದಂತಾಗುವದಲ್ಲದೆ, ಬೇರೆಯಿಲ್ಲ. ದೊಡ್ಡಣ್ಣನ ಮಾತನ್ನು ಮೀರಿದರೆ ಜನಗಳು ನಮ್ಮನ್ನು ದುರ್ಜನರೆಂದು ಆಡಿಕೊಳ್ಳುವದಲ್ಲದೆ ಬೇರೆಯುಂಟೋ! ತಾವು ಇಷ್ಟಕ್ಕೆ ಕೋಪಿಸಿಕೊಳ್ಳಬಾರದು. ಇವರೆಲ್ಲರೂ ನಮ್ಮಣ್ಣನಿಗೆ ಮೋಸಮಾಡಿದರು. ಅಣ್ಣನವರುತಾನೆ ಏನು ಮಾಡುವರು? ರಾಜನೀತಿಗನುಸಾರವಾಗಿ ಆಡಬೇಕಾಯಿತು." ಎಂದು ಸಮಾಧಾನಪಡಿಸಲು; "ಧನಂಜಯ, ಇದು ರಾಜನೀತಿಯೆಂದು ತಿಳಿಯದಿದ್ದರೆ ಆಯೆರಡು ಕೈಗಳನ್ನು ಆಗಲೇ ಸುಟ್ಟು ಭಸ್ಮಮಾಡಿಬಿಡುತ್ತಿದ್ದೆನು." ಎಂದು ಭೀಮಸೇನನು ನುಡಿದು, ಉಕ್ಕಿಬರುವ ಕೋಪವನ್ನು ಅಡಗಿಸಿ ಕುಳಿತುಕೊಂಡನು.

ಆ ಬಳಿಕ ವಿಕರ್ಣನು ಇಂತೆಂದನು:— "ಎಲೈ ರಾಜರಿರಾ, ಯಾಜ್ಞಸೇನಿಗೆ ನೀವು ಪ್ರತ್ಯುತ್ತರವನ್ನು ಕೊಡಿ. ನಮ್ಮಲ್ಲಿಗೆ ತಂದ ವಿಷಯವನ್ನು ನ್ಯಾಯವಾಗಿ ಇತ್ಯರ್ಥ ಮಾಡದಿದ್ದರೆ ನಾವೆಲ್ಲರೂ ನರಕಕ್ಕೆ ಭಾಗಿಗಳಾಗುತ್ತೇವೆ. ಪ್ರತ್ಯುತ್ತರವನ್ನು ಕೊಡಿ. ಯಾತಕ್ಕೆ ಎಲ್ಲರೂ ಸುಮ್ಮನಿರುವಿರಿ? ಕುರುವೃದ್ಧರಾದ ಭೀಷ್ಮಧೃತರಾಷ್ಟ್ರರೂ, ಧರ್ಮಜ್ಞನಾದ ವಿದುರನೂ ಯಾತಕ್ಕೆ ಸುಮ್ಮನಿರುವರು? ನಮ್ಮ ಕೃಪಾಚಾರ್ಯರು ಯಾತಕ್ಕೆ ಮೌನವಾಗಿರುವರು? ಇಲ್ಲಿ ಬಂದಿರುವ ಅರಸರೆಲ್ಲಾ ರಾಜಪ್ರಸಾದವನ್ನೂ, ಭೀತಿಯನ್ನೂ ಬಗೆಯದೆ, ತಮಗೆ

ನ್ಯಾಯವಾಗಿ ತೋರಿದ್ದನ್ನು ಹೇಳಲಿ. ಎಲೈ ದೊರೆಗಳಿರಾ, ಪರ್ಯಾಲೋಚಿಸಿ ನಿಮ್ಮನಿಮ್ಮ ಪಕ್ಷವನ್ನು ಹೇಳಿ." ಎಂಬದಾಗಿ ಪುನಃಪುನಃ ಕೇಳಿದರೂ ಯಾವ ಪ್ರತ್ಯುತ್ತರವನ್ನೂ ಕೊಡದೆ ಮರದಗೊಂಬೆಗಳಂತೆ ಕುಳಿತಿರುವದನ್ನು ನೋಡಿ ನೋಡಿ, ತನ್ನ ಕೈಗಳನ್ನು ಉಜ್ಜಿಕೊಳ್ಳುತ್ತಾ, ಹಾವಿನಂತೆ ಬುಸುಗುಟ್ಟುತ್ತಾ "ಎಲೈ ರಾಜರುಗಳಿರಾ, ಎಲೈ ಕೌರವರಿರಾ, ನೀವು ಪ್ರತ್ಯುತ್ತರವನ್ನು ಹೇಳಿದರೆ ಹೇಳಿ, ಇಲ್ಲದಿದ್ದರೆ ಬಿಡಿ. ನನಗೆ ಯಾವದು ಧರ್ಮವೆಂದು ತೋರುವದೋ ಅದನ್ನು ಹೇಳುತ್ತೇನೆ. ಬೇಟೆಯೂ, ಮದ್ಯವೂ, ಜೂದೂ, ಸ್ತ್ರೀವ್ಯಸನವೂ ರಾಜರುಗಳಿಗೆ ನಾಲ್ಕು ದುರ್ಗುಣಗಳೆಂದು ಹಿರಿಯರು ಹೇಳುವರು. ಇವುಗಳಲ್ಲಿ ಆಸಕ್ತನಾದವನು ಧರ್ಮಮಾರ್ಗವನ್ನು ಉಲ್ಲಂಘಿಸಿದವನು. ಧರ್ಮಮಾರ್ಗವನ್ನು ಬಿಟ್ಟವನ ಕೆಲಸವು ನ್ಯಾಯವಾದ್ದಲ್ಲ. ಈ ಧರ್ಮರಾಜನು ದ್ಯೂತದಲ್ಲಿ ಈಕೆಯನ್ನು ಸೋತದ್ದು ನ್ಯಾಯವಲ್ಲ ಮತ್ತು ಹಾಗೆ ಸೋಲುವದಕ್ಕೆ ಈಕೆಯು ಧರ್ಮರಾಜನ ವಸ್ತುವೂ ಅಲ್ಲ. ಐದುಜನಕ್ಕೂ ಸಾಮಾನ್ಯಳಾದ ಪತ್ನಿಯು. ಆಕೆಯನ್ನು ಒಡ್ಡಿ ಸೋಲುವದಕ್ಕೆ ಅವನಿಗೆ ಅಧಿಕಾರವೇನು? ಇದೂ ಅಲ್ಲದೆ, ತನ್ನದಲ್ಲದ ಪದಾರ್ಥವನ್ನು ಒಡ್ಡುವದಕ್ಕೆ ತನಗೇನಧಿಕಾರ? ತನ್ನನ್ನೇ ಸೋತಬಳಿಕ ದ್ರೌಪದಿಯನ್ನು ಒಡ್ಡುವದಕ್ಕೆ ಯಾವ ಬಾಧ್ಯತೆ ಇತ್ತು? ಇದನ್ನೆಲ್ಲಾ ಪರ್ಯಾಲೋಚಿಸಿದರೆ, ದ್ರೌಪದಿಯನ್ನು ಗೆದ್ದದ್ದು ನ್ಯಾಯವಲ್ಲವೆಂದು ನನಗೆ ತೋರುತ್ತದೆ." ಎಂದನು.

ಈ ಮಾತುಗಳನ್ನು ಕೇಳಿದೊಡನೆ ಜನಗಳ ಕಳಕಳವು ಹೆಚ್ಚಿತು. ಕೆಲವರು ದುರ್ಯೋಧನನನ್ನು ದೂರಲಾರಂಭಿಸಿದರು. ಮತ್ತೆ ಕೆಲವರು ವಿಕರ್ಣನನ್ನು ಹೊಗಳಿದರು.

ಆ ಕಾಲದಲ್ಲಿ ರಾಧಾಸುತನಾದ ಕರ್ಣನು ಎದ್ದು ನಿಂತುಕೊಂಡು "ವಿಕರ್ಣ, ನೀನು ಯಾಕೆ ಕೋಪದಿಂದ ಉರಿದು ಬೀಳುತ್ತೀಯೆ? ದ್ರೌಪದಿಯು ಕೇಳಿಕೊಂಡಾಗಲೂ ಇಲ್ಲಿ ಯಾರೂ ಮರುಮಾತನಾಡಲಿಲ್ಲ. ಅವಳನ್ನು ಸೋತದ್ದು ಧರ್ಮವೆಂದು ಎಲ್ಲರೂ ಒಪ್ಪಿಕೊಂಡಿದ್ದಾರೆ. ನೀನು ಯಾತಕ್ಕೆ ಹೀಗೆ ಒದರಿಕೊಳ್ಳುತ್ತೀಯೆ? ಅರಿಯದ ಹುಡುಗರು ತಲೆನರೆತವರಂತೆ ವಿವೇಕವನ್ನು

ಹೇಳುವದಕ್ಕೆ ಬರಬಾರದು. ಸಾಕು, ಸುಮ್ಮನಿರು. ದ್ರೌಪದಿಯನ್ನು ಜಯಿಸಿದ್ದು ನ್ಯಾಯವಲ್ಲವೆಂದು ಎನ್ನುತ್ತೀಯಲ್ಲಾ, ಅದು ಹ್ಯಾಗೊ? ಅದು ನ್ಯಾಯವಲ್ಲವೊ? ಧರ್ಮರಾಜನೇ ಅವಳನ್ನು ಒಡ್ಡಲಿಲ್ಲವೊ? ಸುಬಲನು ಒಪ್ಪಿಕೊಳ್ಳಲಿಲ್ಲವೊ? ಏನಪ್ಪಾ, ಮಗು, ನಿನ್ನ ಧರ್ಮವನ್ನು ಸ್ವಲ್ಪ ಹೇಳಪ್ಪಾ, ಕೇಳಿ ನಾವೂ ಸ್ವಲ್ಪ ತಿಳಿದುಕೊಳ್ಳೋಣ! ಹೇಳು, ಹೇಳು. ಅಯ್ಯೋ, ಮರುಳೇ, ಕೇಳು. ದ್ರೌಪದಿಯು ಪತಿವ್ರತೆಯಾಗಿ ಎಲ್ಲರಂತೆಯೂ ಇದ್ದಪಕ್ಷದಲ್ಲಿ ನಾವು ಮಾಡಿದ್ದು ಅನ್ಯಾಯವೇ ಸರಿ. ಐದು ಜನದ ಸೂಳೆ ಅವಳು. ಅವಳಿಗೆ ಮಾನವೇನು, ಅವಮಾನವೇನು? ಈ ಹುಡುಗನ ಮಾತನ್ನು ಕಟ್ಟಿಕೊಂಡು ಫಲವೇನು? ಅವಳ ಬಟ್ಟೆಯನ್ನೂ ಪಾಂಡವರ ಬಟ್ಟೆಬರೆಯನ್ನೂ ಸುಲಿದುಕೋ." ಎಂದು ಕೂಗಿ ದುಶ್ಶಾಸನನಿಗೆ ಹೇಳಿದನು.

ಕೂಡಲೆ ಪಾಂಡವರು ತಮ್ಮ ಉತ್ತರೀಯಗಳನ್ನು ಕಳೆದಸೆದರು. ಕೂಡಲೆ ದುಶ್ಶಾಸನನು ದ್ರೌಪದಿಯು ಉಟ್ಟ ಏಕವಸ್ತ್ರವನ್ನೂ ತೆಗೆಯಲು ಕೈಯಿಕ್ಕಿದನು.

ಆಗ ದ್ರೌಪದಿಯು ವಾತಾಹತಕದಳೀಪತ್ರದಂತೆ ನಡುಗುತ್ತಾ, ಕಣ್ಣಿಲ್ಲವೂ ಕಣ್ಣೀರಾಗುವಂತೆ ಅಳುತ್ತಾ, ಇಂದ್ರಸದೃಶ ಪರಾಕ್ರಮಿಗಳಾದ ಪತಿಗಳೈವರನ್ನೂ ರಕ್ಷಕರೆಂದು ಅಜ್ಞಾನದಿಂದ ಮೊದಲು ಭಾವಿಸಿ, "ಹೀಗೆ ನನ್ನನ್ನು ಉಪೇಕ್ಷಿಸುವದು ನಿಮಗೆ ಉಚಿತವೇ!" ಎಂದು ಹೇಳುವದಕ್ಕೋ ಎಂಬಂತೆ ನೋಡುತ್ತಾ ಬಳಿಕ, ಹರಿಯಲ್ಲದೆ ಬೇರೆಯಾರೂ ಆಪತ್ತಿಗೆ ಒದಗರೆಂಬ ವಸಿಷ್ಠರ ವಾಕ್ಯವನ್ನು ಮನಸ್ಸಿಗೆ ತಂದುಕೊಂಡು, ಅವಾಪ್ತಸಮಸ್ತಕಾಮನಾಗಿಯೂ, ಸೃಷ್ಟಿಸ್ಥಿತಿಸಂಹಾರಕನಾಗಿಯೂ ಇರುವ ಶ್ರೀಮನ್ನಾರಾಯಣನು ಭಕ್ತರನ್ನು ರಕ್ಷಿಸುವದಕ್ಕಾಗಿಯೇ ವಸುದೇವಕುಮಾರನಾಗಿ ಕೃಷ್ಣರೂಪದಿಂದ ದ್ವಾರಕೆಯಲ್ಲಿ ಅವತಾರಮಾಡಿರುವದನ್ನು ನೆನೆದು ಆತನ ಆಕೃತಿಯು ಮನದಲ್ಲಿ ಪ್ರತಿಬಿಂಬಿಸಿದಂತೆ ಧ್ಯಾನಮಾಡುತ್ತಾ, "ಎಲೈ ಪ್ರಣತಾರ್ತಿಹರ, ಕೌರವಾರ್ಣವಮಗ್ನಳಾದ ನನ್ನನ್ನು ರಕ್ಷಿಸು. ಹಾ ಕೃಷ್ಣ, ದ್ವಾರಕಾವಾಸಿ, ಯಾದವನಂದನ, ಎಲ್ಲಿ ಮರಸಿಕೊಂಡಿರುತ್ತೀಯೆ? ಇಂಥಾ ದುರ್ದಶೆಗೆ ಸಿಕ್ಕಿದ ನನ್ನನ್ನು ಯಾಕೆ

ಉಪೇಕ್ಷಿಸುತ್ತೀಯೆ? ಇದು ನಿನಗುಚಿತವೆ? ಶಂಖಚಕ್ರಗದಾಪಾಣಿ, ದ್ವಾರಕಾನಿಲಯ, ಅಚ್ಯುತ, ಗೋವಿಂದ, ಪುಂಡರೀಕಾಕ್ಷ, ಶರಣಾಗತಳಾದ ನನ್ನನ್ನು ರಕ್ಷಿಸು, ರಕ್ಷಿಸು." ಎಂದು ಆರ್ತಧ್ವನಿಯೊಡನೆ ಮೂರ್ಛಿತಳಾದಳು.

ಭಕ್ತ ಕುಟುಂಬಿಯಾದ ಶ್ರೀಮನ್ನಾರಾಯಣನು ಅದನ್ನು ಕೇಳಿ ಸಹಿಸಲಾರದೆ ಅಲ್ಲಿಗೆ ಬಂದು, ಎಲ್ಲರಿಗೂ ಅದೃಶ್ಯನಾಗಿ ಆಕೆಗೆಮಾತ್ರ ಕಾಣಿಸಿಕೊಂಡು, ಆಕೆಗೆ ಮಾನಭಂಗವಾಗದಂತೆ ವಸ್ತ್ರಗಳಿಂದ ಆಚ್ಛಾದಿಸುತ್ತಿದ್ದನು.

ಎಷ್ಟೆಷ್ಟು ಸೆಳದಾಗ್ಯೂ ಸೀರೆಗಳು ಬರುತ್ತಲೇ ಇದ್ದವು. ಎಳೆದೆಳೆದು ಬೇಸತ್ತು ದುಶ್ಶಾಸನನ ಹಾಳುತೋಳುಗಳು ಬೆಂಡಾದವು. ಜನರೆಲ್ಲರೂ ಈ ಆಶ್ಚರ್ಯವನ್ನು ನೋಡಿ ದ್ರೌಪದಿಯನ್ನು ಕೊಂಡಾಡಿದರು; ದುಶ್ಶಾಸನನನ್ನು ಮನಬಂದಂತೆ ಬೈದರು. ಆಗ ಭೀಮಸೇನನು ತನ್ನ ಕೈಗಳನ್ನು ಹಿಸಿಕಿಕೊಳ್ಳುತ್ತಾ ಎದ್ದು ನಿಂತು, "ಎಲೈ ರಾಜರುಗಳಿರಾ, ಕೇಳಿ. ನಾನು ಹೇಳುವ ಮಾತನ್ನು ಯಾರೂ ಕೇಳಿದ್ದೂ ಇಲ್ಲ; ಮುಂದೆ ಕೇಳುವದೂ ಇಲ್ಲ. ಈ ನಾಯಿಯ ಎದೆಯ ಮೂಳೆಯನ್ನು ನೆಗ್ಗಿ, ಇವನ ಹೃದಯವನ್ನು ಬಗಿದು ರಕ್ತವನ್ನು ಪಾನಮಾಡದಿದ್ದರೆ ನನಗೆ ಸದ್ಗತಿಯುಂಟಾಗದಿರಲಿ!" ಎಂದು ಘೋರ ಪ್ರತಿಜ್ಞೆಯನ್ನು ಮಾಡಿದನು. ದುಶ್ಶಾಸನನು ಬೇಸತ್ತು, ಕಂಗೆಟ್ಟು, ಬಳಲಿ, ಕುಳಿತುಕೊಳ್ಳಲು; ನಾಲ್ಕು ಕಡೆಯಿಂದೆದ್ದ "ಛೀ, ಛೀ, ದುಶ್ಶಾಸನ", "ಏನನ್ಯಾಯ, ಏನನ್ಯಾಯ", ಕುರುವೃದ್ಧರೂಕೂಡ ದ್ರೌಪದಿಯ ಪ್ರಶ್ನೆಗೆ ಉತ್ತರ ಕೊಡುವದಿಲ್ಲ.", "ಧೃತರಾಷ್ಟ್ರನನ್ನು ಸುಡಬೇಕು. ಇಂಥಾ ಅನ್ಯಾಯ ನಡೆಯಬಹುದೇ!" ಎಂಬ ಇವೇ ಮೊದಲಾದ ಶಬ್ದವು ಸಭಾಂತರಾಳವನ್ನು ಪೂರೈಸಿ, ಎಲ್ಲರ ತಲೆಯನ್ನು ನಡುಗಿಸಿತು.

ಆಗ ಧರ್ಮಜ್ಞನಾದ ವಿದುರನು ಎದ್ದುನಿಂತು ಸಭೆಯ ಕಳಕಳವನ್ನಡಗಿಸಿ, ಇಂತೆಂದನು:—

"ಎಲೈ, ಸಭಿಕರಿರಾ, ನೀವು ದ್ರೌಪದಿಯ ಗೋಳನ್ನು ಕೇಳಿಯೂ ಆಕೆಗೆ ಪ್ರತ್ಯುತ್ತರವನ್ನು ಕೊಡದೆ ಮೂಕರಾಗಿರುವಿರಿ. ಸುಶೀಲವೂ, ನೀತಿಯೂ ಸಂಕಟಪಡುತ್ತಿದ್ದರೂ, ನೀವೆಲ್ಲರೂ ಸುಮ್ಮನಿರುವಿರಿ. ಇದು ಪರಮಾಶ್ಚರ್ಯ, ಪೀಠಿ

ತನಾದವನು ಸಜ್ಜನರ ಸಭೆಗೆ ಯಾತಕ್ಕೋಸ್ಕರ ಬರುತ್ತಾನೆ? ತನ್ನ ದುಃಖೋಪಶಮನಕ್ಕಲ್ಲವೆ? ನೀತಿಜ್ಞರು ಹಾಗೆ ಬಂದವನ ದುಃಖವನ್ನು ವಿಚಾರಿಸಿ ನ್ಯಾಯವಾದ್ದನ್ನು ಹೇಳಿ, ಸಮಾಧಾನಪಡಿಸುವದು ಧರ್ಮವಲ್ಲವೆ? ದ್ರೌಪದಿಯು ಕೇಳಿದ್ದು ನ್ಯಾಯವಾದ ಪ್ರಶ್ನೆಯಲ್ಲವೆ? ಹೀಗೆ ಮಾನಭಂಗಮಾಡಿದ್ದು ಅನ್ಯಾಯವಲ್ಲವೆ? ನಮ್ಮನಮ್ಮ ಲಾಭನಷ್ಟಗಳಲ್ಲಿ ದೃಷ್ಟಿಯಿಡದೆ, ನಮ್ಮನಮ್ಮ ಭಯಾಭಯಗಳಲ್ಲಿ ಕಣ್ಣಿಡದೆ, ಯಾವದು ನ್ಯಾಯವೋ, ಯಾವದು ಧರ್ಮಮಾರ್ಗಾನುಸಾರವಾದದ್ದೋ ಅದನ್ನೇ ನಾವು ಹೇಳಬೇಕು. ವಿಕರ್ಣನು, ತನಗೆ ಯಾವದು, ಧರ್ಮವೆಂದು ತೋರಿತೋ, ಅದನ್ನು ಹೇಳಿದನು. ನೀವೂ ಅವನಂತೆ, ನಿಮನಿಮಗೆ ತೋರಿದ್ದನ್ನು ಹೇಳುವದು ಧರ್ಮ. ಧರ್ಮಶಾಸ್ತ್ರವನ್ನರಿತು, ನ್ಯಾಯಸ್ಥಾನಕ್ಕೆ ಹೋಗಿ ತನ್ನನ್ನು ಕೇಳಿದಾಗ ಧರ್ಮವಾದದ್ದನ್ನು ಹೇಳದಿದ್ದವನು ಅನೃತವನ್ನು ಹೇಳಿದ ದೋಷದಲ್ಲಿ ಅರ್ಧಕ್ಕೆ ಗುರಿಯಾಗುತ್ತಾನೆ. ಧರ್ಮಶಾಸ್ತ್ರವನ್ನು ತಿಳಿದೂ ಕೇಳಿದಾಗ ಅಪಲಪಿಸಿದವನು ಅಸತ್ಯವನ್ನು ಆಡಿದವನ ಪಾಪಕ್ಕೆ ಗುರಿಯಾಗುತ್ತಾನೆ.

“ಇದಕ್ಕೆ ದೃಷ್ಟಾಂತವಾಗಿ ಹಿರಿಯರು ಒಂದು ಪೂರ್ವಕಥೆಯನ್ನು ಹೇಳುವದುಂಟು. ಹಿಂದೆ ಪ್ರಹ್ಲಾದನೆಂಬ ರಾಕ್ಷಸಾಧಿಪನಿದ್ದನು. ಅವನಿಗೆ ವಿರೋಚನನೆಂಬ ಪುತ್ರನಿದ್ದನು. ಒಂದು ಕನ್ಯಾರ್ಥವಾಗಿ ವಿರೋಚನನಿಗೂ ಅಂಗಿರಸಪುತ್ರನಾದ ಸುಧನ್ವನಿಗೂ ಕಲಹವುಂಟಾಗಿ, ಅವರಿಬ್ಬರೂ ಬಹು ಕಾಲದವರೆಗೂ ‘ನಾನು ದೊಡ್ಡವನು, ತಾನು ದೊಡ್ಡವನು’ ಎಂದು ಕೂಗಾಡುತ್ತಿದ್ದು, ಕೊನೆಗೆ ತಮ್ಮ ಕಲಹವನ್ನು ವ್ಯವಸ್ಥೆಮಾಡುವಂತೆ ಪ್ರಹ್ಲಾದನನ್ನೇ ಕೇಳಿಕೊಂಡರು. ಪ್ರಹ್ಲಾದನು ಅವರ ಕಲಹಕ್ಕಂಜಿ ಸುಧನ್ವನನ್ನು ನೋಡಲು; ಅವನು ಕುಪಿತನಾಗಿ ‘ನೀನು ಪ್ರತ್ಯುತ್ತರವನ್ನು ಹೇಳದೆ ಇದ್ದರೂ ಸರಿ, ಅಸತ್ಯವನ್ನು ಹೇಳಿದರೂ ಸರಿ, ನಿನ್ನ ತಲೆಯು ಸಹಸ್ರಭಾಗವಾಗಿ ಹೋಗುವದು’ ಎಂದು ಹೇಳಿದನು. ಅದಕ್ಕೆ ಹೆದರಿ, ಯಾವ ರೀತಿಯಲ್ಲಿ ಪ್ರತ್ಯುತ್ತರವನ್ನು ಹೇಳಬೇಕೋ ತಿಳಿಯದೆ, ಇದನ್ನು ತಿಳಿದುಕೊಳ್ಳಬೇಕೆಂದು ಕಶ್ಯಪನ ಬಳಿಗೆ ಹೋಗಿ ಅವನನ್ನು ಕೇಳಿದನು.

"'ನ್ಯಾಯಸ್ಥಾನಕ್ಕೆ ಹೋಗಿ ಕೇಳಿದಾಗ ತನಗೆ ತಿಳಿದ ವಿಷಯವನ್ನು ಯಾವನು ಭೀತಿಯಿಂದಾಗಲಿ, ಮಾತ್ಸರ್ಯದಿಂದಾಗಲಿ, ಲೋಭದಿಂದಾಗಲಿ ಮರೆ ಮಾಜುತ್ತಾನೆಯೋ, ಅವನು ತನ್ನ ಕೊರಲನ್ನು ವರುಣಪಾಶದಲ್ಲಿ ಸಿಕ್ಕಿಸಿ ಕೊಳ್ಳುವನು. ಕಣ್ಣಿಂದ ನೋಡಿದ ವಿಷಯವನ್ನೇ ಆಗಲಿ, ಕಿವಿಯಿಂದ ಕೇಳಿದ ವಿಷಯವನ್ನೇ ಆಗಲಿ, ನ್ಯಾಯಸ್ಥಾನದಲ್ಲಿ ವ್ಯತ್ಯಾಸವಾಗಿ ಯಾವನು ಹೇಳು ವನೋ, ಅವನು ವರುಣಪಾಶ ಸಹಸ್ರದಿಂದ ಕಟ್ಟುಬೀಳುವನು. ಆದಕಾರಣ ನಿಶ್ಚಯವನ್ನು ತಿಳಿದವನು ಮರೆಮಾಜದೆ ಹೇಳಬೇಕು. ಸಜ್ಜನರು ಬಾಧಿತರಾಗಿ ಸಭೆಗೆ ಬಂದು ದೂರುಹೇಳಿಕೊಂಡಲ್ಲಿ ವಿಚಾರಿಸದಿದ್ದರೆ, ಆ ಬಾಧೆಯನ್ನುಂಟು ಮಾಡಿದ ದೋಷಕ್ಕೆ ಸಭಿಕರೇ ಗುರಿಯಾಗುವರು. ಆಸ್ಥಾನದಲ್ಲಿ ಒಂದು ಅನ್ಯಾ ಯವು ನಡೆದರೆ ಅದನ್ನು ಧಿಕ್ಕರಿಸದೆ ಬಿಟ್ಟಲ್ಲಿ ಸಭಾನಾಯಕನಿಗೆ ಅರ್ಧದೋಷವೂ, ಅನ್ಯಾಯವನ್ನು ನಡಿಸಿದವನಿಗೆ ಕಾಲುಪಾಲು ದೋಷವೂ, ಮಿಕ್ಕವರಿಗೆ ಕಾಲು ಪಾಲು ದೋಷವೂ ಪ್ರಾಪ್ತಿಸುವದು. ಧಿಕ್ಕರಿಸಿದಲ್ಲಿ ಒಬ್ಬರೂ ದೋಷಭಾಗಿಗ ಳಾಗುವದಿಲ್ಲ; ಮಾಡಿದವನೊಬ್ಬನೇ ದೋಷಭಾಗಿಯಾಗುವನು. ಮುಖ್ಯವಾಗಿ ಅನ್ಯಾಯವನ್ನು ಆಡಿದಲ್ಲಿ, ಹದಿನಾಲ್ಕು ಲೋಕಗಳಲ್ಲಿಯೂ ಅವನಿಗೆ ಗತಿ ಕೆಟ್ಟುಹೋಗುವದು. ತನ್ನ ಐಶ್ವರ್ಯವನ್ನೆಲ್ಲಾ ಹಾಳುಮಾಡಿಕೊಂಡವನ ದುಃಖ ವೂ, ಪುತ್ರಶೋಕವೂ, ಋಣಬಾಧೆಯಿಂದುಂಟಾದ ದುಃಖವೂ, ಅರಮನೆಗೆ ಸರ್ವಸ್ವವನ್ನೂ ತೆತ್ತವನ ದುಃಖವೂ, ಬಂಜೆಯ ದುಃಖವೂ, ಹುಲಿಯ ಬಾಯಿಗೆ ತುತ್ತಾದವನ ದುಃಖವೂ, ಸಪತ್ನಿಯ ದುಃಖವೂ, ದುಷ್ಟಸಾಕ್ಷಿಗಳ ಅಸತ್ಯ ವಾದದಿಂದ ಎಲ್ಲವನ್ನೂ ಕಳೆದುಕೊಂಡವನ ದುಃಖವೂ ಸಮಾನವೆಂಬದಾಗಿ ಹಿರಿಯರು ಹೇಳುವರು. ಸುಳ್ಳನ್ನು ಹೇಳುವವನಿಗೆ ಈ ದುಃಖಗಳೆಲ್ಲಾ ಪ್ರಾಪ್ತಿ ಸುವವು. ಒಂದು ವಿಷಯವನ್ನು ಕಂಡದ್ದೇ ಆಗಲಿ, ನೋಡಿದ್ದೇ ಆಗಲಿ, ತಿಳಿದುಕೊಂಡಿದ್ದೇ ಆಗಲಿ, ಆದಮಾತ್ರದಿಂದಲೆ ಒಬ್ಬನು ಸಾಕ್ಷಿಯಾಗ ಬಹುದು. ಆಗ ಅವನು ಸತ್ಯವನ್ನೇ ಹೇಳಬೇಕು. ಸತ್ಯವನ್ನು ಹೇಳುವದರಿಂದ ಅವನಿಗೆ ಯಾವಬಾಧೆಯೂ ಉಂಟಾಗಲಾರದು.' ಎಂಬದಾಗಿ ಕಶ್ಯಪನು ಹೇಳಿದನು.

"ಆದನ್ನು ಕೇಳಿ, ಪ್ರಹ್ಲಾದನು ತನ್ನ ಮಗನನ್ನು ಕರೆದು 'ಅಪ್ಪಾ, ನನಗಿಂತ ಅಂಗಿರಸನು ಹ್ಯಾಗೆ ಮೇಲೋ, ನಿಮ್ಮ ತಾಯಿಗಿಂತ ಸುಧನ್ವನ ತಾಯಿಯು ಹ್ಯಾಗೆ ಹೆಚ್ಚೋ, ಹಾಗೆಯೇ ನಿನಗಿಂತಲೂ ಸುಧನ್ವನೇ ಶ್ರೇಷ್ಠ.' ಎಂದನು. ಅದಕ್ಕೆ ಸುಧನ್ವನು ಮೆಚ್ಚಿ, ನೀನು ಪುತ್ರವ್ಯಾಮೋಹದಿಂದಲೂ ಮೋಸ ಹೋಗದೆ ಸತ್ಯವನ್ನೇ ಹೇಳಿದ್ದರಿಂದ, ನಿನ್ನ ಮಗನು ಶತಾಯುವಾಗಿರಲಿ.' ಎಂದು ಆಶೀರ್ವದಿಸಿ ಹೊರಟುಹೋದನು. ಈ ತತ್ವವನ್ನು ತಿಳಿದಮೇಲಾದರೂ ನೀವೆಲ್ಲರೂ ಪರ್ಯಾಲೋಚಿಸಿ, ನಿಮ್ಮ ನಿಮ್ಮ ಅಭಿಪ್ರಾಯಗಳನ್ನು ತಿಳಿಸಿರಿ." ಎಂದು ವಿದುರನು ಹೇಳಿದನು.

ಆದಕ್ಕೆ ಯಾರೂ ಯಾವ ಪ್ರತ್ಯುತ್ತರವನ್ನೂ ಕೊಡಲಿಲ್ಲ. ಎಲ್ಲರೂ ಮರದ ಗೊಂಬೆಗಳಂತೆ ಸುಮ್ಮನಿದ್ದರು. ಆಗ ಕರ್ಣನು ದುಶ್ಶಾಸನನ್ನು ನೋಡಿ, "ಈ ಗೌಡಿಯನ್ನು ಎಳೆದುಕೊಂಡು ಹೋಗು." ಎಂಬದಾಗಿ ಹೇಳಲು; ದುಶ್ಶಾಸನನು ದ್ರೌಪದಿಯನ್ನು ಮುಂದಲೆ ಹಿಡಿದು ದರದರನೆ ಸೆಳೆದನು.

ಹಾಗೆ ದರದರನೆ ಎಳೆಯುವ ದುಶ್ಶಾಸನನನ್ನು ನೋಡಿ, "ಎಲಾ ನೀಚಾ, ಸ್ವಲ್ಪ ನಿಲ್ಲು. ನಾನು ಹಿರಿಯರಿಗೆ ಅಭಿವಂದಿಸುವಕ್ಕೆ ಮುಂಚೆಯೇ ನನ್ನನ್ನು ಎಳೆದುಕೊಂಡು ಹೋಗಬೇಡ." ಎಂದು ಹೇಳುವ ದ್ರೌಪದಿಯ ಮಾತುಗಳಿಗೆ ಕಿವಿಗೊಡದೆ ಕ್ರೂರವಾಗಿ ಎಳೆಯಲು; ಮುಂದೆ ಬೀಳುವ ಕೌರವರ ಭಾಗ್ಯಲಕ್ಷ್ಮಿಯೋ ಎಂಬಂತೆ, ಆ ರಾಜಪುತ್ರಿಯು ನೆಲದಲ್ಲಿ ಧೊಪ್ಪನೆ ಬಿದ್ದು ಪ್ರಳಾಪಿಸಿದಳು:—

"ಅಯ್ಯೋ! ಹಿಂದೆ ಸ್ವಯಂವರಕಾಲದಲ್ಲಿ ನಾನು ರಾಜಾಸ್ಥಾನದಲ್ಲಿ ಬಂದಿದ್ದೆನಲ್ಲದೆ ಇದುವರೆಗೂ ಬಂದದ್ದಿಲ್ಲ. ಅಯ್ಯೋ! ಅರಮನೆಯಲ್ಲಿ ಸೂರ್ಯನ ಮುಖಾವಲೋಕನವನ್ನೂ ಮಾಡದ ನಾನು ಹೀಗೆ ಎಲ್ಲರ ಕಣ್ಣಿಗೂ ಬಿಳಬೇಕಾಯಿತೇ! ಅಯ್ಯೋ. ನನ್ನಲ್ಲಿ ವಾಯುವಿನ ಸ್ಪರ್ಶವನ್ನೂಕೂಡ ಸಹಿಸದೇ ಇದ್ದ ಪಾಂಡವರು ಈಗ ಈ ನೀಚನಿಂದ ಸೆಳೆಯಲ್ಪಡುತ್ತಿರುವದನ್ನು ನೋಡಿಯೂ ಸುಮ್ಮನಿರುವರಲ್ಲಾ. ಇವರಂತೆಯೇ ಯಾಕೆ ಕುರುವೃದ್ಧರೂ ಸುಮ್ಮನಿರುವರು? ಇದನ್ನು ನೋಡಿದರೆ ಕೇಡುಗಾಲವು ಕೈಗೂಡಿದಂತೆ ಕಾಣುವದು. ಅಯ್ಯೋ,

ಇದಕ್ಕಿಂತಲೂ ಹೀನವಾದ ಸ್ಥಿತಿ ಯಾವದಿರುವದು? ಸ್ತ್ರೀಯಾದ ನಾನು ಇಂಥಾ ದೊಡ್ಡ ಸಭೆಯಲ್ಲಿಯೂ ಸಂಕಟಪಡಬೇಕಾಯಿತೇ! ಅರಸರ ಧರ್ಮವೆಲ್ಲಿ ಮರಸಿಕೊಂಡಿತು! ಆಪತ್ತಿನಲ್ಲಿಯೂ ಕೂಡ ಸ್ತ್ರೀಯರನ್ನು ಸಭೆಗೆ ಬರಮಾಡಿಸ ಬಾರದೆಂಬ ಹಿರಿಯರ ನುಡಿ ಕೌರವರಲ್ಲಿ ನಾಶವಾಯಿತೇ! ಎಲೈ ಪೂಜ್ಯರೇ ದ್ರುಪದಮಹಾರಾಜನ ಮಗಳಾಗಿ, ಧರ್ಮಾತ್ಮರಾದ ಪಾಂಡವರ ಪತ್ನಿಯಾಗಿ, ಶ್ರೀಕೃಷ್ಣನ ಸಖಿಯಾಗಿ ನಾನು ಇವರಿಗೆ ದಾಡಿಯಾಗಬಹುದೇ! ಕುರುವಂಶ ಕೀರ್ತಿಯನ್ನು ನಾಶಮಾಡುವ ಈ ನೀಚನು ನನ್ನನ್ನು ಬಲವಾಗಿ ಸೆಳೆಯುತ್ತಿರುವನು. ಅಯ್ಯೋ, ಇದನ್ನು ಹ್ಯಾಗೆ ಸಹಿಸಲಿ! ಇವರು ಧರ್ಮದಿಂದ ಜಯಿಸಿದರೇ, ಇಲ್ಲವೇ? ಹೇಳಿ. ಅದರಂತೆ ನಡೆದುಕೊಳ್ಳುವೆನು."

ಆ ರೀತಿಯಲ್ಲಿ ಪ್ರಳಾಪಿಸುತ್ತಿರಲು; ಭೀಷ್ಮನು "ಎಲೌ ಪೂಜ್ಯಳೆ, ಕೇಳು. ಧರ್ಮಮಾರ್ಗವು ಅತಿಸೂಕ್ಷ್ಮವಾದದ್ದೆಂದು ನಾನು ಹಿಂದೆಯೇ ಹೇಳಲಿಲ್ಲವೆ? ಪಂಡಿತರೂ ಕೂಡ ಒಂದೊಂದು ಕಾಲದಲ್ಲಿ ಮೋಸಹೋಗುವರು, ಬೇರೆಯೇನು? ಪ್ರಬಲನಾದವನು ಅನ್ಯಾಯವನ್ನು ಹೇಳಿದರೂ ಅದು ನ್ಯಾಯವಾಗುವದು; ಎಲ್ಲರೂ ನ್ಯಾಯವೆಂದು ಒಪ್ಪಿಕೊಳ್ಳುವರು. ಬಡವರ ನ್ಯಾಯಕ್ಕೂ ಬಡತನವೇ ಬರುವದು. ನೀನು ಕೇಳಿದ ಪ್ರಶ್ನೆಗೆ ನಾನು ಸಮಾಧಾನವನ್ನು ಹೇಳಲಾರೆನು. ಮುಖ್ಯವಾಗಿ ಕೌವರವರೆಲ್ಲರೂ ದುರಾಶಾಗ್ರಸ್ತರಾಗಿರುವರು. ಇನ್ನು ಕೆಲವು ಕಾಲದಲ್ಲಿಯೇ ನಮ್ಮ ಕೌರವವಂಶವು ನಷ್ಟವಾಗಿ ಹೋಗುವದರಲ್ಲಿ ಯಾವ ಸಂಶಯವೂ ಇಲ್ಲ. ನಿನ್ನ ಪತಿಗಳು ಧರ್ಮಮಾರ್ಗವನ್ನು ಮೀರಿ ನಡೆಯತಕ್ಕವರಲ್ಲ. ಇಂಥಾ ಆಪತ್ಕಾಲದಲ್ಲಿಯೂ ನೀನು ಧರ್ಮೈಕದೃಷ್ಟಿಯಾಗಿರುವದು ನಿನಗೆ ಸಹಜವಾಗಿಯೇ ಇರುವದು. ವಯೋವೃದ್ಧರೂ, ಜ್ಞಾನವೃದ್ಧರೂ ಆದ ದ್ರೋಣಾದಿಗಳು ತಲೆಬಗ್ಗಿಸಿಕೊಂಡು ಜೀವಚ್ಛವಗಳಂತೆ ಕುಳಿತಿರುವರು. ಯುಧಿಷ್ಠಿರನು ಧರ್ಮಶಾಸ್ತ್ರಜ್ಞನಾದ್ದರಿಂದ ಆತನೇ ಇದರ ತತ್ವವನ್ನು ತಿಳಿಸುವದು ನ್ಯಾಯವಾಗಿ ತೋರುತ್ತದೆ." ಎಂದು ಹೇಳಿ ಕುಳಿತುಕೊಂಡನು.

ಸಭೆಯಲ್ಲಿದ್ದ ರಾಜರುಗಳೆಲ್ಲರೂ ದುರ್ಯೋಧನನ ಭಯದಿಂದ ಯಾವ ಮಾತನ್ನೂ ಆಡದೆ ಸುಮ್ಮನಿದ್ದರು. ದುರ್ಯೋಧನನು "ಓ ಯಾಜ್ಞಸೇನಿ, ನೀನು

ಕೇಳಿದ ಪ್ರಶ್ನೆಗೆ ನಿನ್ನ ಗಂಡಂದಿರು ಪ್ರತ್ಯುತ್ತರವನ್ನು ಕೊಡಲಿ. ಮಹಾಪರಾಕ್ರಮಶಾಲಿಯಾದ ನಿನ್ನ ಭೀಮಸೇನನೂ, ನಿನ್ನ ಅರ್ಜುನನೂ, ನಿನ್ನ ನಕುಲಸಹದೇವರೂ ಹೇಳಲಿ. ನಿನ್ನವರೆಲ್ಲರೂ ಧರ್ಮರಾಜನು ತಮ್ಮ ಯಜಮಾನನಲ್ಲವೆಂದು ಹೇಳಲಿ. ಸತ್ಯವಂತನಾದ ಧರ್ಮರಾಜನ ಮಾತನ್ನು ನಿನಗೋಸ್ಕರ ಸುಳ್ಳೆಂದು ಹೇಳಲಿ. ಆ ಕ್ಷಣವೇ ನಿನ್ನನ್ನು ಬಿಟ್ಟುಬಿಡುವೆನು. ಸತ್ಯಶೀಲನಾದ ಧರ್ಮಪುತ್ರನೇ ಹೇಳಲಿ. ನಿನಗೆ ಅವನು ಸ್ವಾಮಿಯೋ ಅಲ್ಲವೋ, ಅವನೇ ತಿಳಿಸಲಿ. ಅವನ ಮಾತಿನಮೇರೆ ನೀನು ಅವರನ್ನೇ ಆಗಲಿ, ನಮ್ಮನ್ನೇ ಆಗಲಿ ಅಂಗೀಕರಿಸು. ನಿನ್ನ ದುರವಸ್ಥೆಗಾಗಿ ಇಲ್ಲಿ ಎಲ್ಲರೂ ಅನುತಾಪಪಡುತ್ತಿರುವರು. ಆದರೆ ನಿನ್ನ ಗಂಡಂದಿರನ್ನು ನೋಡಿ ಎಲ್ಲರೂ ಏನನ್ನೂ ಹೇಳಲಾರದೆ ಸುಮ್ಮನಿರುವರು." ಎನಲು; ಸಭೆಯಲ್ಲಿದ್ದವರೆಲ್ಲರೂ ಈ ಮಾತುಗಳಿಗೆ ಮೆಚ್ಚಿ, ಧರ್ಮನಂದನನು ಏನು ಹೇಳುವನೋ ಎಂಬ ಕುತೂಹಲದಿಂದ ಅವನನ್ನೇ ನೋಡುತ್ತಿದ್ದರು.

ಆಗ ಭೀಮಸೇನನು ಎದ್ದು ನಿಂತುಕೊಂಡು "ಧರ್ಮಜ್ಞನಾದ ನಮ್ಮ ಅಣ್ಣನು ನಮಗೆ ಸ್ವಾಮಿಯಾಗಿಲ್ಲದೆ ಇದ್ದಪಕ್ಷದಲ್ಲಿ ಕೌರವರು ಮಾಡಿದ್ದನ್ನೆಲ್ಲಾ ಅಡಗಿಸಿಕೊಂಡು ನಾವು ಹೀಗೆ ಇರುತ್ತಿದ್ದೆವೆ? ನಮ್ಮಣ್ಣನೇ ನಮಗೆ ಎಲ್ಲಾ ವಿಧದಲ್ಲಿಯೂ ಸ್ವಾಮಿಯು. ತಾನು ಸೋತವನೆಂದು ನಮ್ಮಣ್ಣನು ಹೇಳಿದರೆ, ನಾವೂ ಸೋತವರೆಂದೇ ಭಾವಿಸಿಕೊಳ್ಳುತ್ತೇವೆ. ಹಾಗೆಮಾತ್ರವಿಲ್ಲದಿದ್ದಲ್ಲಿ ಪಾಂಚಾಲರಾಜಪುತ್ರಿಯ ಮುಂದಲೆಯನ್ನು ಮುಟ್ಟಿ ಜೀವದೊಡನೆ ಹೋಗುವ ಜಂತುವೊಂದೂ ಇರುತ್ತಿತ್ತೋ? ಇದೋ! ಯಮದಂಡದಂತಿರುವ ನನ್ನ ತೋಳುಗಳನ್ನು ನೋಡಿ. ಇವುಗಳಲ್ಲಿ ಸಿಕ್ಕಿಕೊಂಡಬಳಿಕ ತಪ್ಪಿಸಿಕೊಂಡು ಹೋಗುವ ಆಶೆಯೂ ಉಂಟೇ! ಧರ್ಮಕ್ಕೆ ಕಟ್ಟುಬಿದ್ದು ಅಣ್ಣನ ಮಾತಿಗೆ ಒಳಪಟ್ಟು, ಅರ್ಜುನನ ಮಾತನ್ನು ಮೀರಲಾರದೆ, ನಾನು ಸುಮ್ಮನಿರುವೆನು. ಯುಧಿಷ್ಠಿರನು ಆಜ್ಞೆಯನ್ನು ಕೊಡಲಿ; ಈ ಬಡನರಿಗಳನ್ನೆಲ್ಲಾ ಕಲ್ಲುಗಳಿಂದಲೇ ಹೊಡೆದು ಕೊಂದುಬಿಡುವೆನು." ಎಂದನು.

"ನಿನಗೆ ಇದೆಲ್ಲವೂ ಸಾಧ್ಯವೇ ಸರಿ. ಆದಾಗ್ಯೂ ದುಡುಕಬೇಡ, ದುಡುಕಬೇಡ." ಎಂದು ಭೀಷ್ಮದ್ರೋಣವಿದುರಾದಿಗಳು ಕೂಗಿ ಸಮಾಧಾನವನ್ನು ಹೇಳಿದರು.

"ಈ ಸಭೆಯಲ್ಲಿರುವವರಲ್ಲಿ ಭೀಷ್ಮನೂ, ವಿದುರನೂ, ದ್ರೋಣನೂ ಸ್ವತಂತ್ರರಾಗಿರುವಂತಿದೆ. ಇವರು ಮೂರುಜನರೂ ಯಾವಾಗಲೂ ತಮ್ಮ ಸ್ವಾಮಿಯನ್ನೇ ನಿಂದಿಸುವರು; ಯಾವಾಗಲೂ ಅವನ ಅಹಿತವನ್ನೇ ಬಯಸುವರು. ಎಲೌ ದ್ರೌಪದಿ ಪುತ್ರನೂ, ಪತ್ನಿಯೂ, ದಾಸಿಯೂ ಯಾವಾಗಲೂ ಸ್ವತಂತ್ರರಲ್ಲ. ಅವರು ಏನನ್ನೂ ಆರ್ಜಿಸಲಾರರು; ಆರ್ಜಿಸಿದರೂ ಅವರವರ ಸ್ವಾಮಿಗೆ ಸೇರುತ್ತದೆ. ನೀನು ದಾಸನ ಪತ್ನಿಯಾದ್ದರಿಂದ ನಿನಗೆ ಸ್ವಾತಂತ್ರ್ಯವಿಲ್ಲ. ನೀನು ರಾಣಿವಾಸಕ್ಕೆ ಹೋಗಿ ಅಲ್ಲಿ ಗೌಡಿಯಾಗಿರು. ಈಗ ನಿನಗೆ ಕೌರವರು ಸ್ವಾಮಿಗಳು. ಪಾಂಡವರ ಹಂಬಲನ್ನು ಬಿಡು. ಎಲೌ ಸುಂದರಿ, ನಿನಗೆ ಇಷ್ಟವಾದರೆ ಬೇರೆ ಒಬ್ಬ ಗಂಡನನ್ನು ಸಂಪಾದಿಸಿಕೊ. ಅವನಾದರೂ ನಿನ್ನನ್ನು ಜೂದಿನಲ್ಲಿ ಒಡ್ಡದಿರಲಿ. ಗೌಡಿಯರು ಒಬ್ಬಿಬ್ಬರು ಪತಿಗಳನ್ನು ಅಂಗೀಕರಿಸಿದರೆ, ದೋಷವಿಲ್ಲವೆಂದು ಗೊತ್ತೇ ಇದೆ. ತನ್ನ ಹೆಂಡತಿಯನ್ನೂ ಜೂದಿನಲ್ಲಿ ಒಡ್ಡುವವನ ವಿವೇಕವನ್ನೂ, ಅವನ ಬಾಳನ್ನೂ ಸುಡು." ಎಂದು ಕರ್ಣನು ಹೇಳಿದನು.

ಅದಕ್ಕೆ ಭೀಮಸೇನನು ಅಣ್ಣನ ಮುಖವನ್ನು ನೋಡಿ, "ಅಣ್ಣಾ, ನೀವು ಹೀಗೆ ಮಾಡದಿದ್ದರೆ ಈ ಸೂತನ ಮಗನೂ ಹೀಗೆ ಹೇಳುತ್ತಾ ಇದ್ದನೇ!" ಎಂದು ಬಹಳ ವ್ಯಸನದಿಂದ ಹೇಳಿದನು.

ಭೀಮಸೇನನಿಗೆ ಮತ್ತಷ್ಟು ಕೋಪವನ್ನು ಹೆಚ್ಚಿಸಬೇಕೆಂದೆಣಿಸಿ, ದುರ್ಯೋಧನನು ತನ್ನ ಎಡದೊಡೆಯ ಬಟ್ಟೆಯನ್ನು ತೆಗೆದು ದ್ರೌಪದಿಗೆ ತೋರಿಸಿದನು.

ಅದನ್ನು ನೋಡಿ ಭೀಮಸೇನನು ತನ್ನ ಕೆಂಪಾದ ಕಣ್ಣುಗಳನ್ನರಳಿಸಿ, "ಆದೇ ತೊಡೆಯನ್ನು ಯುದ್ಧದಲ್ಲಿ ತುಮುರುತುಮುರಾಗಿ ಕತ್ತರಿಸದಿದ್ದರೆ ವೃಕೋದರನಿಗೆ ಸದ್ಗತಿಯುಂಟಾಗದಿರಲಿ!" ಎಂದು ಪ್ರತಿಜ್ಞೆಮಾಡಿದನು. ಉರಿಯುವ ಮರದ ಪೊಟ್ಟರೆಗಳಿಂದ ಕಿಡಿಗಳು ಹಾರುವಂತೆ, ಭೀಮಸೇನನ ಪ್ರತ್ಯಂಗಗಳಿಂದಲೂ ಕಿಡಿಗಳು ಹಾರುತ್ತಿದ್ದವು.

"ಎಲೈ ಕೌರವರಿರಾ, ಭೀಮಸೇನನಿಂದುಂಟಾಗುವ ವಿಪತ್ತನ್ನು ಪರ್ಯಾಲೋಚಿಸಿ. ಇದು ನಿಶ್ಚಯವಾಗಿಯೂ ವಿಧಿಕೃತವೆಂದೇ ತಿಳಿಯಿರಿ. ಧೃತರಾಷ್ಟ್ರಪುತ್ರರು ನ್ಯಾಯಮಾರ್ಗವನ್ನು ಮೀರಿ ಜೂದಾಡಿದರು. ಈಗ ನಮ್ಮ

ಕಣ್ಣಿದಿರಿಗೆ ಒಬ್ಬ ರಾಜಪುತ್ರಿಗೆ ಅವಮಾನವನ್ನುಂಟುಮಾಡಿದರು. ಇಗೋ, ನಿಮ್ಮ ರಾಜ್ಯವು ಅವಸಾನಕ್ಕೆ ಬಂದಿತು. ನಾನು ಹೇಳುವ ಮಾತನ್ನು ಲಾಲಿಸಿ. ಸುಗಣರುಗಳನ್ನು ಹಿಂಸಿಸಿದರೆ ಸಭೆಯೇ ಕೆಟ್ಟುಹೋಗುವದು. ಯುಧಿಷ್ಠಿರನು ತನ್ನನ್ನು ಸೋಲುವದಕ್ಕೆ ಮುಂಚೆ ದ್ರೌಪದಿಯನ್ನು ಒಡ್ಡಿ ಸೋತಿದ್ದಲ್ಲಿ ಯಾವ ಆಕ್ಷೇಪಣೆಯೂ ಇರುತ್ತಿರಲಿಲ್ಲ. ತನ್ನನ್ನೇ ಸೋತು, ಬಳಿಕ ತನಗೆ ಸೇರದ ವಸ್ತುವನ್ನು ಸೋಲುವದೂ, ಗೆಲ್ಲುವದೂ ಕನಸಿನ ಗಂಟನ್ನು ಸೋತಂತೆಯೂ ಗೆದ್ದಂತೆಯೂ ಆಗುವದು. ಕರ್ಣನ ಮಾತನ್ನು ಕೇಳಿ ಸತ್ಯವನ್ನು ಮೀರಿ ನಡೆಯಬೇಡಿ." ಎಂದು ವಿದುರನು ಹೇಳಲು;

"ಧರ್ಮಪುತ್ರನು ಸ್ವಾಮಿಯಲ್ಲವೆಂದು ಮಿಕ್ಕ ಪಾಂಡವರು ಹೇಳಲಿ; ಯಾಜ್ಞಸೇನಿಯನ್ನು ಆ ನಿಮಿಷದಲ್ಲಿ ಬಿಟ್ಟು ಕಳುಹುವೆನು." ಎಂದು ದುರ್ಯೋಧನನು ಹೇಳಿದನು.

ಆ ಮಾತಿಗೆ "ಕುಂತೀಪುತ್ರನು ತನ್ನನ್ನು ಸೋಲುವದಕ್ಕೆ ಮುಂಚೆ ನಮ್ಮ ಸ್ವಾಮಿಯೇ ಸರಿ. ತನ್ನನ್ನೇ ಸೋತಬಳಿಕ ಯಾರಿಗೆ ಸ್ವಾಮಿಯೋ, ಕೌರವರೇ ನಿರ್ಣಯಿಸಲಿ." ಎಂದು ಅರ್ಜುನನು ನುಡಿದನು.

ಅದೇ ಕಾಲದಲ್ಲಿ ಧೃತರಾಷ್ಟ್ರನ ಯಜ್ಞಶಾಲೆಯಲ್ಲಿ ನರಿಗಳು ಕೂಗಿಕೊಂಡವು. ಕತ್ತೆಗಳು ನಾಲ್ಕು ದಿಕ್ಕಿನಲ್ಲಿಯೂ ಅರಚಿಕೊಂಡವು. ಇನ್ನೂ ನಾನಾ ವಿಧವಾದ ದುಶ್ಶಕುನಗಳೂ ಉಂಟಾದವು. ಅದನ್ನೆಲ್ಲಾ ನೋಡಿ, ದ್ರೋಣ ಭೀಷ್ಮಾದಿಗಳು 'ಸ್ವಸ್ತಿ, ಸ್ವಸ್ತಿ' ಎಂದರು. ಗಾಂಧಾರಿಯು ಅಳುತ್ತಾ ಬಂದು, ಪತಿಯೊಡನೆ ಆ ಅಶುಭಸೂಚನೆಗಳನ್ನೆಲ್ಲಾ ತಿಳಿಸಿದಳು. ಧೃತರಾಷ್ಟ್ರನು ವಿಷಣ್ಣಚಿತ್ತನಾಗಿ ಮಗನನ್ನು ನೋಡಿ "ಅಯ್ಯೋ, ದುರ್ಮತೀ! ಇತರರ ಧರ್ಮಪತ್ನಿಯನ್ನು ನೋಯಿಸಿದಾಗಲೇ ನಿನ್ನ ಐಶ್ವರ್ಯವೆಲ್ಲವೂ ಹಾಳಾದವು." ಎಂದು ಹೇಳಿ, ದ್ರೌಪದಿಯನ್ನು ಕುರಿತು "ಅಮ್ಮಾ, ನೀನು ಮಹಾಪತಿವ್ರತೆ, ಸುಶೀಲೆ, ನಿನಗೆ ಬೇಕಾದದ್ದನ್ನು ಬೇಡು, ಕೊಡುವೆನು." ಎನ್ನಲು;

"ಮಾವನವರಿಗೆ ನನ್ನ ಇಷ್ಟವನ್ನು ಸಲಿಸುವ ಇಚ್ಛೆಯಿದ್ದಲ್ಲಿ ಧರ್ಮಪುತ್ರನನ್ನು ಬಿಟ್ಟುಕೊಡಬೇಕು. ಪ್ರತಿವಿಂಧ್ಯನ ತಂದೆಯು ದಾಸನಾಗದಿರಬೇಕು." ಎನಲು;

" ಹಾಗೆಯೇ ಆಗಲಿ, ಮತ್ತೊಂದು ವರವನ್ನು ಕೇಳು. " ಎಂದನು.

" ಬೇರೆ ಕೇಳಿಕೊಳ್ಳತಕ್ಕದ್ದೇನಿರುವದು. ನನ್ನ ಪತಿಗಳನ್ನೆಲ್ಲಾ ಅವರವರ ರಥಗಳೊಡನೆಯೂ ಆಯುಧಗಳೊಡನೆಯೂ ಬಿಟ್ಟುಕೊಡಬೇಕೆಂಬುವದೇ. " ಎನ್ನಲು ;

" ಹಾಗೆಯೇ ಆಗಲಿ, ಇನ್ನೂ ಒಂದನ್ನು ಕೇಳು. " ಎಂದನು.

" ಕ್ಷತ್ರಿಯರು ಎರಡು ವರಗಳಿಗಿಂತ ಹೆಚ್ಚಾಗಿ ಕೇಳಬಾರದು. ನನ್ನ ಪತಿಗಳು ಸ್ವತಂತ್ರರಾದಬಳಿಕ ನನಗೆ ಸಮಸ್ತಸಂಪತ್ತೂ ಕೈಗೂಡಿತು. " ಎಂದು ದ್ರೌಪದಿಯು ಹೇಳಿದಳು.

ಅದನ್ನು ಕೇಳಿ ವಿಸ್ಮಯಪಟ್ಟು, " ಇಂಥಾ ಆಶ್ಚರ್ಯಕರವಾದ ವ್ಯಾಪಾರವನ್ನು ಕಂಡದ್ದೂ ಇಲ್ಲ, ಕೇಳಿದ್ದೂ ಇಲ್ಲ. ಇವಳೇ ಪತಿವ್ರತಾಶಿರೋಮಣಿಯು; ಅಶರಣರಾಗಿ ದುಃಖಸಾಗರದಲ್ಲಿ ಮುಳುಗುತ್ತಿದ್ದ ಪಾಂಡವರಿಗೆ ನಾವೆಯಾಗಿ ಅವರನ್ನು ತೀರಕ್ಕೆ ತಂದುಬಿಟ್ಟಳು. " ಎಂದು ಜನಗಳು ದ್ರೌಪದಿಯನ್ನು ಹೊಗಳಿದರು.

ಭೀಮಸೇನನು ಎದ್ದು ನಿಂತುಕೊಂಡು, " ಇಂಥಾ ಧರ್ಮಪತ್ನಿಯನ್ನು ಹೀಗೆ ಮಾಡಿದ ಕೌರವರ ಗಂಟಲನ್ನು ಮುರಿದು, ಬಿಸಿಯ ರಕ್ತದಿಂದ ನಾಯಿನರಿಗಳಿಗೆ ಹಬ್ಬವನ್ನು ಮಾಡುವೆನು. " ಎಂದು ಹಲ್ಲು ಕಡಿಯುತ್ತಾ, ಮರವನ್ನು ನೋಡಿದನು.

ಧರ್ಮರಾಜನು ಅವನ ಇಂಗಿತವನ್ನರಿತು ಅವನನ್ನು ಆಲಿಂಗಿಸಿ ಸಮಾಧಾನಗೊಳಿಸಿ, ಬಳಿಕ ಧೃತರಾಷ್ಟ್ರನಲ್ಲಿಗೆ ಹೋಗಿ " ಎಲೈ ಪ್ರಭುವೆ, ನೀನೇ ನಮಗೆ ಸ್ವಾಮಿ. ನಾವು ಏನು ಮಾಡಬೇಕೋ, ಅದನ್ನು ಆಜ್ಞಾಪಿಸು. ನಾವು ಯಾವಾಗಲೂ ನಿಮಗೆ ವಿಧೇಯರು. " ಎಂದು ಹೇಳಿದನು.

ಆ ವಚನಗಳನ್ನು ಕೇಳಿ, ಧೃತರಾಷ್ಟ್ರನು " ಅಜಾತಶತ್ರೂ! ನಿನಗೆ ಶುಭವಾಗಲಿ! ನೀನು ಸುಖವಾಗಿರು. ನೀನು ಹೋಗಿ ನಿನ್ನ ರಾಜ್ಯವನ್ನು ಸುಖವಾಗಿ ಆಳುತ್ತಿರು. ಅಪ್ಪಾ, ಈ ಮುದುಕನ ಮಾತನ್ನು ಲಾಲಿಸು. ಈ ಹಿತೋಕ್ತಿಯಂತೆ ನಡೆ. ನೀನು ಧರ್ಮಮಾರ್ಗವನ್ನು ಅರಿತವನು. ಹಿರಿಯರ ಮಾತನ್ನು ಮೀರುವವನಲ್ಲ. ಆದ್ದರಿಂದ ನಿನಗೆ ಹೇಳುತ್ತೇನೆ, ಕೇಳು. ಸತ್ಪುರುಷ

ರು ಇತರರಲ್ಲಿ ಸದ್ಗುಣವನ್ನು ನೋಡುವರಲ್ಲದೆ, ಶತ್ರುಗಳಲ್ಲಿಯೂ ದುರ್ಗುಣವನ್ನೆಣಿಸರು; ಇತರರು ತಮಗೆ ಮಾಡಿದ ಉಪಕಾರವನ್ನು ನೆನೆಯುವರಲ್ಲದೆ, ಅಪಕಾರಗಳನ್ನು ನೆನೆಯರು; ಪ್ರತ್ಯುಪಕಾರದ ಆಸೆಯಿಲ್ಲದೆ, ಇತರರಿಗೆ ಉಪಕಾರವನ್ನು ಮಾಡುವರು. ಎಲೈ ಯುಧಿಷ್ಠಿರ, ನೀಚರು ಕ್ರೂರವಾದ ಮಾತುಗಳನ್ನು ಆಡುವರು; ಮಧ್ಯಸ್ಥರು ಅದಕ್ಕೆ ಪ್ರತಿಯಾಗಿ ಹೇಳುವರು; ಉತ್ತಮರು ಅದನ್ನು ಲಕ್ಷ್ಯಮಾಡದೆ ಸುಮ್ಮನಿರುವರು. ತಮ್ಮಂತೆಯೇ ಇತರರನ್ನು ಭಾವಿಸುವವರೇ ಯೋಗ್ಯರೆನಿಸಿಕೊಳ್ಳುವರು. ನೀನು ನಿನ್ನ ನಡೆತೆಯಿಂದ ನಿನ್ನ ಸದ್ಗುಣಗಳನ್ನು ಪ್ರಕಟಿಸಿದೆ. ನಮ್ಮ ಮಕ್ಕಳ ದೌಷ್ಟ್ಯವನ್ನು ಮರೆ. ನನ್ನನ್ನೂ ಗಾಂಧಾರಿಯನ್ನೂ ನೋಡಿ ಅವರ ತಪ್ಪನ್ನು ಮನ್ನಿಸು. ವೃದ್ಧನಾಗಿಯೂ, ಅಂಧನಾಗಿಯೂ, ಇನ್ನೂ ಜೀವಂತನಾಗಿಯೂ ಇರುವ ನನ್ನನ್ನು ನೋಡು. ನಾನು ವಿನೋದಾರ್ಥವಾಗಿ ಈ ದ್ಯೂತಕ್ಕೆ ಒಡಂಬಟ್ಟೆನು; ಇನ್ನು ಮೇಲೆ ಇದಕ್ಕೋಸ್ಕರ ಯಾರೂ ಪಶ್ಚಾತ್ತಾಪಪಡಬೇಕೆಲಸವಿಲ್ಲ. ನಿನ್ನಲ್ಲಿ ಸದ್ಗುಣವೂ, ಭೀಮನಲ್ಲಿ ಪರಾಕ್ರಮವೂ, ಅರ್ಜುನನಲ್ಲಿ ತಾಳ್ಮೆಯೂ, ನಕುಲ ಸಹದೇವರಲ್ಲಿ ವಿನಯವೂ ನೆಲೆಗೊಂಡಿರುವವು. ಹಿಂದಣದೆಲ್ಲವನ್ನೂ ಮರೆತು, ಪತ್ನೀ ಪುತ್ರ ಭ್ರಾತೃ ಸಮೇತರಾಗಿ, ಖಾಂಡವಪ್ರಸ್ಥಕ್ಕೆ ಮರಳಿ ಸುಖವಾಗಿ ಹೋಗಿ, ನೀವು ರಾಜ್ಯಭಾರವನ್ನು ಮಾಡುತ್ತಾ, ಅನ್ಯೋನ್ಯವಾಗಿ ಬಾಳಿ." ಎಂದು ಹೇಳಿ ಕಳುಹಿಕೊಟ್ಟನು.

## ೧೦. ಪಾಂಡವರು ಪುನಃ ದ್ಯೂತವಾಡಿ ಸೋತು, ವನವಾಸಕ್ಕೆ ಹೋದದ್ದು.

ಪಾಂಡವರು ಸುಖವಾಗಿ ಪ್ರಯಾಣಮಾಡಿದರೆಂದು ದುಶ್ಶಾಸನನಿಂದ ಕೇಳಿ, ದುರ್ಯೋಧನನು ತನ್ನ ದುಷ್ಟಮಂತ್ರಿಗಳೊಡನೆ ಧೃತರಾಷ್ಟ್ರನಲ್ಲಿಗೆ ಬಂದು, ಸಾಂತ್ವವಚನಗಳಿಂದ ಇಂತೆಂದನು:—

"ಎಲೈ ಪ್ರಭುವೆ, ನಮ್ಮ ಸರ್ವಪ್ರಯತ್ನವೂ ನಿಷ್ಫಲವಾಯಿತು. ಎಲ್ಲಾ ತೆರದಲ್ಲಿಯೂ ಶತ್ರುಗಳು ವಧ್ಯರೆಂಬ ಶುಕ್ರನ ವಾಕ್ಯವು ನಿಮಗೆ ತಿಳಿಯದೆ

ಇಲ್ಲ. ಪಾಂಡವರನ್ನು ನಮ್ಮ ವಶವರ್ತಿಗಳನ್ನಾಗಿ ಮಾಡಿಕೊಂಡು ಪುನಃ ಅವರಿಗೆ ಸ್ವಾತಂತ್ರ್ಯ ಕೊಡುವದು ಉಚಿತವಲ್ಲ. ಯಾವನು ಸರ್ಪವನ್ನು ಕೆಣಕಿ ಅದನ್ನು ಕತ್ತಿನ ಮೇಲೆಯೂ, ಮೈಯ ಮೇಲೆಯೂ ಬಿಟ್ಟುಕೊಳ್ಳುವನು? ಈಗ ಪಾಂಡವರು ನಮ್ಮನ್ನು ಸುಮ್ಮನೆ ಬಿಡುತ್ತಾರೆಯೇ? ಗಾಂಡೀವಧರನಾದ ಅರ್ಜುನನೂ, ಗದಾಧರನಾದ ಭೀಮಸೇನನೂ ನಮ್ಮನ್ನು ನಿರ್ಮೂಲಿಸದೆ ಬಿಡುವರೆ? ಎಲೈ ತಂದೆಯೇ, ಪಾಂಡವರನ್ನು ಕರೆತರಿಸು. ಪುನಃ ಜೂದಾಡಿ ಅವರನ್ನು ಗೆಲ್ಲಬೇಕೆಂದಿರುವೆವು. ನಮ್ಮ ಶಕುನಿಯು ಜೂದಿನಲ್ಲಿ ಬಹಳ ನಿಪುಣನು. ಅವರನ್ನು ಜಯಿಸುವದರಲ್ಲಿ ಸಂಶಯವೇ ಇಲ್ಲ. ಜೂದಿನಲ್ಲಿ ಸೋತವರು ಹನ್ನೆರಡು ವರ್ಷ ವನವಾಸವನ್ನೂ ಒಂದು ವರ್ಷ ಅಜ್ಞಾತವಾಸವನ್ನೂ ಮಾಡಬೇಕೆಂದು ನಿಯಮಮಾಡಿಕೊಳ್ಳುವೆವು. ಶಕುನಿಯು ಅವರನ್ನು ಸೋಲಿಸುವದರಲ್ಲಿ ಏನೇನೂ ಸಂಶಯವಿಲ್ಲ. ಪಾಂಡವರು ವನವಾಸಕ್ಕೆ ಹೋಗಿಯೇ ಹೋಗುವರು ; ಮರಳಿ ಅವರು ತಮ್ಮ ದೇಶದ ಮುಖವನ್ನು ಬೇರೆ ನೋಡುವದಿಲ್ಲ. ಪಾಂಡವರ ಧನದಿಂದಲೇ ಸಕಲ ರಾಜರುಗಳನ್ನು ವಶಮಾಡಿಕೊಂಡು ಅವರ ಅಜ್ಞಾತವಾಸವು ನೆರವೇರದಂತೆ ನೋಡಿಕೊಳ್ಳುವೆವು. ಅಜ್ಞಾತವಾಸಕ್ಕೆ ಭಂಗವುಂಟಾದ ಮೇಲೆ ಪುನಃ ದ್ವಾದಶವರ್ಷಗಳ ಅರಣ್ಯವಾಸವು ಅವರ ತಲೆಯಲ್ಲಿ ಕಟ್ಟಿಯೇ ಇರುವದು. ಅವರು ಕಾಡಿನಲ್ಲಿ ಹುಟ್ಟಿದವರುತಾನೆ; ಅವರು ಕಾಡುಪಾಲಾಗಿಯೇ ಹೋಗಲಿ. ಅಂತೂ ಇಂತೂ ಕುಂತಿಯ ಪುತ್ರರಿಗೆ ರಾಜ್ಯವಿರಕೂಡದು. ನಾವೇ ನಾವಾಗಿ ರಾಜ್ಯವನ್ನು ಆಳುತ್ತಿರಬೇಕು. ಅವರ ಸಂಪತ್ತೆಲ್ಲಾ ನಮಗೆ ಸೇರಿದರೆ ನಾವು ರಾಜ್ಯದಲ್ಲಿ ರೂಢಮೂಲರಾಗುವೆವು. ದ್ಯೂತಕ್ಕೆ ಅಪ್ಪಣೆ ಕೊಡು." ಎಂದು ಹೇಳಿದನು.

ಆ ಮಾತಿಗೆ ಧೃತರಾಷ್ಟ್ರನು ಪುತ್ರವ್ಯಾಮೋಹದಿಂದ ಮರುಳಾಗಿ, ಪಾಂಡವರ ಬಳಿಗೆ ದೂತರನ್ನು ಅಟ್ಟಬೇಕೆಂದಿದ್ದನು.

ಭೀಷ್ಮಾದಿಗಳು ಬೇಡಬೇಡವೆಂದು ಹೇಳುತ್ತಿದ್ದರು.

ಈ ಮಧ್ಯದಲ್ಲಿ ಗಾಂಧಾರಿಯು ಬಂದು, ಮಹಾದುಃಖಿತಳಾಗಿ ಪತಿಯನ್ನು ನೋಡಿ "' ಹುಟ್ಟಿದಾಗಲೆ ದುರ್ಯೋಧನನ್ನು ತ್ಯಜಿಸು, ಲೋಕಕ್ಕೆ ಕ್ಷೇಮ

ವುಂಟಾಗುವದು' ಎಂದು ವಿದುರನು ಹೇಳಿದ್ದನ್ನು ನೀನು ಕೇಳಲಿಲ್ಲ. ಇವನು ಹುಟ್ಟಿದಾಗ ಕತ್ತೆಯ ಹಾಗೆ ಅರಚಿಕೊಂಡದ್ದನ್ನೂ, ಆಗ ಯಜ್ಞಶಾಲೆಯಲ್ಲಿ ನರಿಗಳು ಕೂಗಿಕೊಂಡದ್ದನ್ನೂ ಜ್ಞಾಪಿಸಿಕೊ. ನೀನೇ ಈ ಕಾರ್ಯಕ್ಕೆ ಅನುಮತಿಸಿ ಕುಲಕ್ಕೆ ಭಂಗವನ್ನು ತರಬೇಡ. ಹುಡುಗರ ಮಾತನ್ನು ಕೇಳಿ ಮೋಸಹೋಗಬೇಡ. ನಮ್ಮ ಕುಲದ ವಿನಾಶಕ್ಕೆ ನೀನೇ ಕಾರಣನಾಗಬೇಡ. ಕಟ್ಟಿದ ಸೇತುವನ್ನು ಯಾವನು ತಾನೆ ಒಡೆಯುವನು? ಸಕಲವನ್ನು ಸುಟ್ಟು ತಾನೇ ಶಾಂತವಾದ ಉರಿಯನ್ನು ಯಾವನು ಉರಿಸುವದಕ್ಕೆ ಯತ್ನಮಾಡುವನು? ಧರ್ಮರಾಜನನ್ನು ನೋಡು. ದುರ್ಬುದ್ಧಿಯ ಡೊಂಕನ್ನು ಶಾಸ್ತ್ರದಿಂದ ತಿದ್ದುವದಕ್ಕಾದೀತೆ? ವೃದ್ಧನಾದವನು ಮಕ್ಕಳ ಹಾಗೆ ನಡೆಯಬಾರದು. ನೀನೇ ನಿನ್ನ ಮಕ್ಕಳಿಗೆ ಕಣ್ಣಾಗಿರು. ದುರ್ಯೋಧನನ ಮಾತನ್ನು ಕೇಳಬೇಡ. ಪಾಂಡವರನ್ನು ಕರೆಯಿಸಬೇಡ." ಎಂದು ಎಷ್ಟೆಷ್ಟು ಹೇಳಿದಾಗ್ಯೂ ಕೇಳದೆ, "ಕುಲಕ್ಕೆ ನಾಶ ಬಂದರೂ ಬರಲಿ. ಪಾಂಡವರನ್ನು ಬರಮಾಡಿಸಿ, ಪುನಃ ದ್ಯೂತವಾಡಿಸುವದೇ ಸಿದ್ಧ." ಎಂದು ಹೇಳಿ, ಪ್ರಾತಿಕಾಮಿಯನ್ನು ಕರೆದು "ಪಾಂಡವರು ಎಷ್ಟು ದಾರಿ ನಡೆದಿದ್ದರೂ ನಾನು ಹೇಳಿದೆನೆಂದು ತಿಳಿಸಿ ಕರೆದುಕೊಂಡುಬಾ." ಎಂದು ಆಜ್ಞಾಪಿಸಿದನು.

ಪ್ರಾತಿಕಾಮಿಯು ಹೋಗಿ, ಧರ್ಮರಾಜನನ್ನು ಕಂಡು ರಾಜಾಜ್ಞೆಯನ್ನು ತಿಳಿಸಿದನು. ಧರ್ಮರಾಜನು ಕೇಳಿ, "ಯಾರಿಂದಲೂ ಲಲಾಟಲಿಪಿಯನ್ನು ತಪ್ಪಿಸುವದಕ್ಕಾಗುವದಿಲ್ಲ. ಜೂದು ಕೆಟ್ಟದ್ದೆಂದು ತಿಳಿದಿರುವೆನು. ಆದಾಗ್ಯೂ ರಾಜಾಜ್ಞೆಯನ್ನು ಮಿೀರಲಾರೆನು. ಸ್ವರ್ಣಮೃಗವು ಅಸಂಭವವೆಂದು ತಿಳಿದೂ ಶ್ರೀರಾಮನು ಬೆನ್ನಟ್ಟ ಹೋಗಿ ಕೇಡಿಗೆ ಒಳಗಾಗಲಿಲ್ಲವೆ? ವಿನಾಶಕಾಲದಲ್ಲಿ ಬುದ್ಧಿಯು ವಿಪರೀತವಾಗುವದು ನಿಜ." ಎಂದು ಹೇಳಿ, ತನ್ನ ಪರಿವಾರದೊಡನೆ ಪಟ್ಟಣವನ್ನು ಪ್ರವೇಶಿಸಿ, ದ್ಯೂತಗೃಹವನ್ನು ಪಿತೃವ್ಯನನ್ನು ನೋಡುವದಕ್ಕೋಸ್ಕರ ಹೊಕ್ಕು, ಅವನಿಗೆ ಅಭಿವಂದಿಸಿ, ತನ್ನನ್ನು ಪುನಃ ಬರಮಾಡಿಸಿದ್ದೇನೆಂದು ಬೆಸಗೊಂಡನು.

ಅದಕ್ಕೆ ಧೃತರಾಷ್ಟ್ರನು "ಅಪ್ಪಾ, ಮತ್ತೇನೂ ಇಲ್ಲ. ಹಿಂದೆ ಜೂದಾಟದಲ್ಲಿ ನಿಮ್ಮನ್ನು ಮೋಸದಿಂದ ಗೆದ್ದು, ನಿಮಗೆ ಮಾನಭಂಗವನ್ನುಂಟುಮಾಡಿ

ಅನ್ಯಾಯಮಾಡಿದರಲ್ಲಾ; ಅದು ನನ್ನ ಮನಸ್ಸಿಗೆ ನೋವುಮಾಡುತ್ತಿತ್ತು. ಈಗ ನೀವು ನ್ಯಾಯವಾಗಿಯೇ ಇನ್ನೊಂದು ಆಟವನ್ನಾಡಿ, ಮಿತ್ರರಂತೆ ಸುಮುಖ ವಾಗಿ ನಿಮ್ಮ ರಾಜ್ಯಕ್ಕೆ ನೀವು ಹೋಗಿಬರಬೇಕು. ಈ ಅಭಿಪ್ರಾಯದಿಂದಲೆ ನಿಮ್ಮನ್ನು ಕರೆಯಿಸಿದೆನು." ಎಂದನು.

ಸಭಾಸದರೆಲ್ಲರೂ ಪೂರ್ವದಂತೆಯೇ ಸೇರಿದ್ದರು. ಶಕುನಿಯು ಧರ್ಮರಾಜನನ್ನು ನೋಡಿ, "ಅಯ್ಯಾ ಯುಧಿಷ್ಠಿರ, ಮಹಾರಾಜನು ಹೇಳಿದ್ದೆಲ್ಲಾ ವಾಸ್ತವ. ನಾವು ದ್ಯೂತದಿಂದ ಮತ್ತರಾಗಿ, ವಿಸ್ಮೃತಿಯಿಂದ ಒಂದು ವೇಳೆ ಅನ್ಯಾಯಮಾಡಿದ್ದರೂ ಇರಬಹುದು. ಅದನ್ನು ನೀನು ಮನಸ್ಸಿನಲ್ಲಿ ಇಡಬೇಡ. ಈವಾಗ ನ್ಯಾಯವಾಗಿ ಆಡೋಣ. ಮೋಸವೆಂದಿಗಾದರೂ ಜೀವಿಸುವದುಂಟೋ! ಈ ವಿನೋದವಾದ ಆಟದಲ್ಲಿ ಗೆದ್ದರೇನು, ಸೋತರೇನು? ದ್ರವ್ಯವನ್ನು ಒಡ್ಡಿದರಲ್ಲವೇ ಮೋಸಕ್ಕೆ ಅವಕಾಶವುಂಟಾಗುವದು. ಅಂಥಾ ಸಂಗತಿಯೇ ಬೇಡ." ಎನ್ನುತ್ತಿರುವಲ್ಲಿ;

"ಅಂಥಾ ಅವಶ್ಯವೇ ಇಲ್ಲ. ಇನ್ನೊಂದು ಪಂತವನ್ನು ಮಾಡಿಕೊಳ್ಳೋಣ. ಈ ಆಟದಲ್ಲಿ ಸೋತವರು ಅಜಿನಧಾರಿಗಳಾಗಿ ಹನ್ನೆರಡು ವರ್ಷ ವನವಾಸ ಮಾಡುವದು, ಬಳಿಕ ಬಂಧುಜನಗಳಲ್ಲಿ ಒಂದು ವರ್ಷ ಅಜ್ಞಾತವಾಸ ಮಾಡುವದು; ಅಜ್ಞಾತವಾಸದಲ್ಲಿ ಯಾರಾದರೂ ಕಂಡು ಹಿಡಿದರೆ, ಪುನಃ ಹನ್ನೆರಡು ವರುಷ ವನವಾಸ, ಯಥಾಪ್ರಕಾರ ಒಂದು ವರುಷ ಅಜ್ಞಾತವಾಸ. ಈ ರೀತಿ ಏರ್ಪಾಡುಮಾಡಿಕೊಂಡು ಆಡೋಣ. ದಾಳವನ್ನು ತೆಗೆದುಕೋ. ಶಕುನೀ, ದಾಳವನ್ನು ಕೊಡು." ಎಂಬದಾಗಿ ದುರ್ಯೋಧನನು ಹೇಳಿದನು.

ಧರ್ಮರಾಜನು "ನಮಗೆ ಇದೇನೋ ವಿಪತ್ಕಾಲದಂತೆ ತೋರುತ್ತದೆ. ನೀವು ಕರೆದರೆ ನಾನು ಆಟಕ್ಕೆ ಬರಬೇಕು; ಇದು ಕ್ಷತ್ರಿಯಧರ್ಮ. ಈಗ ತಾನೆ ಆಟವಾಡಿ ಕೈಸುಟ್ಟುಕೊಂಡಿದ್ದು ಆಗಲೇ ಮರೆತು ಹೋಯಿತೇ! ಕಂಡು ಕಂಡೂ ಈ ದುರ್ವ್ಯಾಪಾರಕ್ಕೆ ಯಾಕೆ ಕೈಯಿಡಬೇಕು. ಈ ಆಟದಿಂದ ಫಲವೇನೋ ವಿಪರೀತವಾಗುತ್ತದೆ. ಆ ಅನರ್ಥಕ್ಕೋಸ್ಕರ ಯಾರೂ ನನ್ನನ್ನು ನಿಂದಿಸಕೂಡದು. ಆ ದೂಷಣೆಗೆ ನಾನುಬೇರೆ ಪಾತ್ರನಾಗತಕ್ಕವನಲ್ಲ." ಎಂದು ದಾಳವನ್ನು ತೆಗೆದುಕೊಂಡನು.

ದೈವದುರ್ವಿಪಾಕದಿಂದ ಧರ್ಮರಾಜನು ಆಟದಲ್ಲಿ ಪರಾಭವವನ್ನು ಹೊಂದಿ, ತಮ್ಮ ನಿಯಮದಂತೆ ದ್ವಾದಶವರ್ಷ ವನವಾಸಕ್ಕೆ ಒಡಂಬಡಬೇಕಾಯಿತು!

ಬಳಿಕ ಅವರು ವನವಾಸಕ್ಕೆ ಪ್ರಯಾಣೋನ್ಮುಖರಾದರು. ದುಶ್ಶಾಸನನು ಪಾಂಡವರನ್ನು ಕುರಿತು "ನೀವು ಧನಮತ್ತರಾಗಿ ನಿಮ್ಮ ಅರಮನೆಯಲ್ಲಿ ನಮ್ಮನ್ನು ಅಪಹಾಸ್ಯಮಾಡಿದರಲ್ಲಾ; ಅದನ್ನು ನೆನೆದುಕೊಳ್ಳಿ. ಇದೋ! ಈ ರುರುಚರ್ಮವನ್ನು ಧರಿಸಿ. ದ್ರುಪದನು ತನ್ನ ಮಗಳನ್ನು ನಿಮಗೆ ಕೊಡುವದಕ್ಕೆ ಏನು ಪುಣ್ಯಮಾಡಿದ್ದನೋ, ಕಾಣೆ. ಎಲೌ ದ್ರೌಪದೀ, ಈ ಷಂಡರನ್ನು ಯಾಕೆ ಮದುವೆಯಾದೆ? ಇವರಿಂದ ಏನು ಸುಖಹೊಂದುತ್ತೀಯೆ? ಇಲ್ಲಿ ನೋಡು. ಮಹಾ ಮಹಾಶೂರರೂ, ಧನಿಕರೂ ಇರುವರು. ಅವರಲ್ಲಿ ಒಬ್ಬರನ್ನು ಕೂಡಿಕೊ. ಈ ಕಷ್ಟಕ್ಕೆ ಒಳಗಾಗಬೇಡ." ಎಂದು ಕ್ರೂರವಾದ ವಾಕ್ಕಿನಿಂದ ಹೃದಯವನ್ನು ಭೇದಿಸಿದನು.

ಭೀಮಸೇನನು ಕೋಪಾಂಧನಾಗಿ ದುಶ್ಶಾಸನನ ಬಳಿಗೆ ಸಿಂಹದಂತೆ ನೆಗೆದು ಬಂದು "ನಿನಗೆ ಸೇರಿದವರನ್ನೆಲ್ಲಾ ನಿಶ್ಶೇಷವಾಗಿ ಕೊಲ್ಲುವೆನು." ಎಂದು ಹೇಳಲು; "ಇದೋ, ಇದೋ! ಆಡು ಬರುತ್ತದೆ, ಆಡು ಬರುತ್ತದೆ." ಎಂದು ಅಜಿನವನ್ನು ತಳೆದ ಭೀಮಸೇನನನ್ನು ತೋರಿಸಿ, ದುಶ್ಶಾಸನನು ಹಾಸ್ಯಮಾಡಿದನು.

ಭೀಮಸೇನನಿಗೆ ಮತ್ತಷ್ಟು ಕೋಪವು ಹೆಚ್ಚಾಗಿ, "ಎಲೋ, ಅರ್ಜುನನ ಬಾಣಗಳು ನಿನ್ನ ಎದೆಯನ್ನು ಸೀಳಿ, ನಿನ್ನ ಪ್ರಾಣರಸವನ್ನು ಕುಡಿಯದಿದ್ದರೆ, ಆತನಿಗೆ ಸದ್ಗತಿಯುಂಟಾಗದಿರಲಿ!" ಎಂದು ಆರ್ಭಟಿಸಿದನು.

ಪಾಂಡವರೆಲ್ಲರೂ ದ್ಯೂತಗೃಹದಿಂದ ಹೊರಕ್ಕೆ ಹೊರಟರು. ಭೀಮಸೇನನ ನಡೆಯನ್ನು ದುರ್ಯೋಧನನು ಅಣಕಿಸಲು; ಅವನು ಹಿಂದಿರುಗಿ, "ಎಲೈ ಸಭಾಸದರೆ, ಕೇಳಿ. ಈ ನೀಚನಾದ ದುರ್ಯೋಧನನ್ನು ನಾನು ಕೊಲ್ಲುವೆನು. ಈ ಕರ್ಣನೀಚನನ್ನು ಅರ್ಜುನನೂ, ಈ ದುಶ್ಶಾಸನಾಧಮನನ್ನು ನಕುಲನೂ ಸಂಹರಿಸುವರು. ಈ ಪಾಪಿಯಾದ ದುರ್ಯೋಧನನನ್ನು ಗದೆಯಿಂದ

ಬಡಿದು, ನೆಲಕ್ಕೆ ಕೆಡಹಿ, ಇದೇ ಕಾಲಿನಿಂದ ಹೀಗೆಯೇ ಇವನ ತಲೆಯನ್ನು ತುಳಿದು, ಇವನ ಎದೆಯ ರಕ್ತವನ್ನು ಸಿಂಹದಂತೆ ಹೀರುವೆನು." ಎಂದು ಕೂಗಿ ಕೋಪದಿಂದ ಹೇಳಿದನು.

ಕೂಡಲೆ ಅಣ್ಣನ ಮಾತು ಸುಳ್ಳಾಗದಂತೆ ಅರ್ಜುನನು ಕರ್ಣನನ್ನು ಕೊಲ್ಲುವದಾಗಿಯೂ ನಕುಲನು ದುಶ್ಶಾಸನನನ್ನು ಕೊಲ್ಲುವದಾಗಿಯೂ ಪ್ರತಿಜ್ಞೆ ಮಾಡಿದರು.

ಆ ಬಳಿಕ ಧರ್ಮರಾಜನು ಧೃತರಾಷ್ಟ್ರಾದಿಗಳಿಗೆ ಕೈಮುಗಿದು ನಿಂತುಕೊಂಡು, " ಸ್ವಾಮಿಾ, ನಿಮ್ಮನ್ನು ಕೇಳಿಕೊಳ್ಳುವೆನು. ನನಗೆ ವನವಾಸಕ್ಕೆ ಅಪ್ಪಣೆಕೊಡಿ. ಹದಿಮೂರು ವರುಷಗಳಾದ ಬಳಿಕ ಪುನಃ ತಮ್ಮ ದರ್ಶನವನ್ನು ತೆಗೆದುಕೊಳ್ಳುವೆನು. " ಎಂಬದಾಗಿ ಹೇಳಿದನು.

ಸಭಾಸದರೆಲ್ಲರೂ ಭಯದಿಂದಲೂ, ದುಃಖದಿಂದಲೂ ಮೂಕೀಭೂತರಾಗಿ ಚಿತ್ರಪ್ರತಿಮೆಗಳಂತೆ ಕುಳಿತಿದ್ದರು. ವೃದ್ಧರೆಲ್ಲಾ ಮನಸ್ಸಿನಲ್ಲಿಯೇ ಇವರಿಗೆ ಕ್ಷೇಮವುಂಟಾಗಲೆಂದು ಹರಸಿದರು.

ವಿದುರನು ಪಾಂಡವರನ್ನು ನೋಡಿ, " ನಿಮ್ಮ ಅವಸ್ಥೆಯೇನೋ ಹೀಗಾಯಿತು. ಇದು ಹೀಗೆ ಪರಿಣಮಿಸುವದೆಂಬದಾಗಿ ನನಗೆ ಹಿಂದೆಯೇ ಗೊತ್ತಾಗಿತ್ತು. ಅದನ್ನು ತಪ್ಪಿಸುವದಕ್ಕಾಗಿ ನಾನೂ ಎಷ್ಟೋ ಪ್ರಯತ್ನಗಳನ್ನು ಮಾಡಿದೆನು; ಹೇಳತಕ್ಕದ್ದನ್ನೆಲ್ಲಾ ಹೇಳಿದೆನು. ಯಾವದೂ ಸಾರ್ಥಕವಾಗಲಿಲ್ಲ. ಈ ಪ್ರಮಾದವಾದ ವಿಪತ್ತೇನೋ ಸಂಭವಿಸಿತು. ' ಗತಂ ನ ಶೋಚಯೇತ್ ಪ್ರಾಜ್ಞಃ ' ಎಂಬುವದು ನಿಮಗೆ ಬೇರೆ ತಿಳಿಯದೇ ಇಲ್ಲ. ಕಿವಿಯೊಳಗಣ ಹುಣ್ಣಿನಂತೆ ಧೀರನ ಮನೋದುಃಖವು ಇತರರಿಗೆ ಗೋಚರಿಸುವದಿಲ್ಲ. ವಿಶೇಷವಾಗಿ ಆಡಿಯೇನು ಪ್ರಯೋಜನ? ನೀವಂತೂ ವನವಾಸಕ್ಕೆ ಹೋಗಿಯೇ ತೀರಬೇಕು. ನೀವು ಎಲ್ಲಿದ್ದರೂ ಧರ್ಮವು ನಿಮ್ಮ ನೆರಳಿನಂತೆ ನಿಮ್ಮೊಡನೆಯೇ ಇರುತ್ತಿರುವದು. ನಾನು ಹೇಳತಕ್ಕದ್ದು ಇನ್ನೊಂದು ಮಾತಿದೆ. ನಿಮ್ಮ ತಾಯಿಯು ಬಹಳ ವೃದ್ಧೆ, ನಿಮ್ಮೊಡನೆ ಕಾಡಿಗೆ ಬರಲಾರಳು. ಅವಳು ನಮ್ಮ ಮನೆಯಲ್ಲಿಯೇ ಇದ್ದುಕೊಂಡಿರಲಿ. " ಎಂದನು.

ಅದಕ್ಕೆ ಧರ್ಮರಾಜನು “ ಹಿರಿಯರ ಮಾತು ಅಲಂಘ್ಯವಾದದ್ದು. ನಮ್ಮ ತಾಯಿಯು ನಿಮ್ಮ ಇಷ್ಟಾನುಸಾರ ನಿಮ್ಮ ಮನೆಯಲ್ಲಿಯೇ ಇರಲಿ. ಇದಕ್ಕೆ ನನ್ನನ್ನು ಕೇಳಬೇಕೇ. ನೀವೇ ನಮಗೆ ಹಿತೈಷಿ, ನೀವೇ ನಮಗೆ ತಂದೆ. ಅರಣ್ಯದಲ್ಲಿ ನಾವು ಹ್ಯಾಗಿರಬೇಕು, ತಿಳಿಸಬೇಕು. ” ಎಂದನು.

“ನಿನಗೆ ತಿಳಿಯದ್ದು ಏನಿರುವದು? ಏನಾದರೂ ನಾನು ಹೇಳಬೇಕೆಂದಿದ್ದರೆ ಇದಲ್ಲದೆ ಮತ್ತೇನು? ನೀವು ಅನುಕೂಲರಾಗಿದ್ದು ಧೌಮ್ಯರು ಹೇಳಿದಂತೆ ಕೇಳಿಕೊಂಡಿರಿ. ನೀವು ಸುಕ್ಷೇಮದಲ್ಲಿ ಹಿಂದಿರುಗುವದನ್ನು ನೋಡುವೆನು.” ಎನಲು; ಪಾಂಡವರು ನಮಸ್ಕಾರಮಾಡಿ ಪ್ರಯಾಣೋನ್ಮುಖರಾದರು.

ಪಾಂಚಾಲಿಯೂ ಅರಣ್ಯಗಮನೋದ್ಯುಕ್ತಳಾಗಿ ತನ್ನ ಅತ್ತೆಯ ಅನುಮತಿಯನ್ನು ಕೇಳುವದಕ್ಕೋಸ್ಕರ ಹೋದಳು; ಹೋಗಿ, ಕುಂತಿಯ ಅನುಮತಿಯನ್ನು ಪಡೆದು, ಮಿಕ್ಕ ಅಂತಃಪುರದ ಸ್ತ್ರೀಜನಗಳಿಗೂ ಹೇಳಿ, ಅವರವರ ಯೋಗ್ಯತಾನುಸಾರವಾಗಿ ಆಲಿಂಗನ ಪಾದಾಭಿವಂದನಾದಿಗಳಿಂದ ಉಪಚರಿಸಿ ಹೊರಡಲುದ್ಯುಕ್ತಳಾದಳು.

ಆಗ ಅಂತಃಪುರವೆಲ್ಲಾ “ಅಯ್ಯೋ!” ಎಂದು ಗೋಳಾಡಿತು. ಕುಂತಿಯು ದ್ರೌಪದಿಯನ್ನು ನೋಡಿ ತನ್ನ ದುಃಖವನ್ನು ಹಿಡಿಯಲಾರದೆ ಗದ್ಗದಧ್ವನಿಯಿಂದ “ಅಮ್ಮಾ, ದ್ರೌಪದೀ, ನಿನಗೆ ಈ ವಿಪತ್ತುಗಳು ಒದಗಿದವೆಂದು ಮರುಗಬೇಡ. ನೀನು ಧರ್ಮವನ್ನು ಚೆನ್ನಾಗಿ ತಿಳಿದವಳು. ಆಮೇರೆಯೇ ನಡಿಯುತ್ತಿರುವವಳು. ಎಲೌ ಹಸನ್ಮುಖೀ, ನಿನಗೆ ನಾನು ಉಪದೇಶ ಮಾಡತಕ್ಕದ್ದೇನಿರುವದು? ನೀನು ಪತಿವ್ರತಾಶಿರೋಮಣಿಯಾಗಿಯೂ, ಯೋಗ್ಯಳಾಗಿಯೂ ಇರುವದರಿಂದಲೇ ಕೊಟ್ಟ ಮನೆಗೂ ಕೊಂಡ ಮನೆಗೂ ಆಭರಣಪ್ರಾಯಳಾಗಿರುತ್ತೀಯೆ. ನಿನ್ನ ಕೋಪಾಗ್ನಿಯಿಂದ ಉರಿದು ಹೋಗದೆ ಇನ್ನೂ ಬದುಕಿಕೊಂಡಿರುವದರಿಂದ ಕೌರವರು ಭಾಗ್ಯಶಾಲಿಗಳೇ ಸರಿ. ನಿನಗೆ ಅರಣ್ಯದಲ್ಲಿಯೂ ಮಂಗಳವುಂಟಾಗಲಿ. ಅಪ್ರತೀಕಾರವಾದದ್ದಕ್ಕೆ ವಿವೇಕಿಗಳು ಶೋಕಿಸುವದಿಲ್ಲ. ನಿನ್ನ ಲೋಕೋತ್ತರವಾದ ಸದ್ಗುಣಗಳೇ ನಿನ್ನನ್ನು ರಕ್ಷಿಸುವವು. ನಿನಗೆ ಸ್ವಲ್ಪಕಾಲದಲ್ಲಿಯೇ ಸರ್ವಸಂಪತ್ತುಗಳೂ ಕೈಸೇರುವವು. ಕಾಡಿನಲ್ಲಿರುವವರೆಗೂ

ನನ್ನ ಸಹದೇವನನ್ನುಮಾತ್ರ ನೋಡಿಕೊಳ್ಳಬೇಕು. ಈ ದುಃಖದಲ್ಲಿ ಅವನು ಕೊರಗಿಹೋಗದಂತೆ ನೀನೇ ನೋಡಿಕೊಂಡುಬರಬೇಕು." ಎಂದಳು. "ಹಾಗೆಯೇ ಆಗಲಿ." ಎಂದು ಹೇಳಿ ಕಣ್ಣೀರನ್ನು ಸುರಿಸುತ್ತಾ ದ್ರುಪದಸುತೆಯು ಹೊರಟುಹೋದಳು.

ಹಿಂದೆಯೇ ಪೃಥಾದೇವಿಯೂ ದುಃಖಾರ್ತಳಾಗಿ ಹೊರಟು ಸ್ವಲ್ಪದೂರದವರೆಗೂ ಹೋದಳು. ಅಷ್ಟರಲ್ಲಿಯೇ, ರಾಜಯೋಗ್ಯವಾದ ವಸ್ತ್ರಾಭರಣಾದಿಗಳನ್ನು ಕಳೆದು ಕೃಷ್ಣಾಜಿನಗಳನ್ನುಟ್ಟುಕೊಂಡು ಬರುತ್ತಿರುವ ತನ್ನ ಮಕ್ಕಳೈವರನ್ನೂ ಕಂಡು ಪುತ್ರವಾತ್ಸಲ್ಯದಿಂದ ಅವರ ಬಳಿಗೆ ಹೋಗಿ, ಅವರನ್ನೆಲ್ಲಾ ಆಲಿಂಗಿಸಿ ದುಃಖಪರವಶಳಾಗಿ "ನೀವೆಲ್ಲರೂ ಧರ್ಮಿಷ್ಠರು, ಯೋಗ್ಯರು, ಮನಸ್ವಿಗಳು, ಸಜ್ಜನಾರಾಧಕರು, ದೇವಭಕ್ತರು, ಯಜ್ಞಕರ್ಮನಿರತರು. ಹೀಗಿದ್ದರೂ ಇಂಥಾ ವ್ಯಸನಗಳು ನಿಮಗೆ ಯಾಕೆ ಒದಗಿದವು? ಈ ದುಃಖಗಳು ಎಲ್ಲಿಯವು? ಯಾರ ಪಾಪದಿಂದ ನಿಮಗೆ ಹೀಗಾಯಿತೋ ತಿಳಿಯಲಿಲ್ಲವಲ್ಲಾ! ಅಯ್ಯೋ, ನೀವೆಲ್ಲರೂ ನನ್ನ ಹೊಟ್ಟೆಯಲ್ಲಿ ಹುಟ್ಟಲಿಲ್ಲವೆ? ಇದೆಲ್ಲಾ ನನ್ನ ಪಾಪದ ಫಲವೇ ಆಗಿರಬೇಕು. ನೀವು ಪಾಪರಹಿತರಾದರೂ ನನ್ನಿಂದ ನಿಮಗೆ ಹೀಗಾಯಿತು. ಶೌರ್ಯದಲ್ಲಿಯೂ, ಪ್ರತಾಪದಲ್ಲಿಯೂ, ದಾರ್ಢ್ಯದಲ್ಲಿಯೂ ನೀವು ಯಾರಿಗೂ ಕಡಮೆಯಾದವರಲ್ಲ. ನಿಮ್ಮ ಸಕಲೈಶ್ವರ್ಯವನ್ನೂ ಬಿಟ್ಟು ಕಾಡಿನಲ್ಲಿ ಯಾವ ರೀತಿಯಲ್ಲಿ ತಾನೆ ವಾಸಮಾಡುವಿರಿ? ಹೀಗೆ ನೀವು ಕಾಡುಪಾಲಾಗುವಿರೆಂದು ತಿಳಿದಿದ್ದರೆ, ಪಾಂಡುರಾಜನ ಮರಣಾನಂತರದಲ್ಲಿ ನಾನು ಹಸ್ತಿನಾಪುರಕ್ಕೆ ಬರುತ್ತಿರಲಿಲ್ಲ. ನಿಮ್ಮ ತಂದೆಯೇ ಪುಣ್ಯವಂತನು. ಋಷಿಚರ್ಯೆಯು ಆತನಿಗೆ ಸಿದ್ಧಿಸಿತು. ನಿಮ್ಮ ಕಷ್ಟಗಳನ್ನು ನೋಡದೆ ಸ್ವರ್ಗಕ್ಕೆ ಸೇರಿದ್ದರಿಂದ ಆತನೇ ಪುಣ್ಯಶಾಲಿ. ಪತಿವ್ರತಾಶಿರೋಮಣಿಯಾದ ಮಾದ್ರೀದೇವಿಯೇ ಧನ್ಯಳು. ಅವಳು ಈ ದುಃಖವನ್ನು ನೋಡಲಿಲ್ಲ. ಛೀ! ನನ್ನ ಜೀವದ ಆಸೆಯನ್ನು ಸುಡಬೇಕು. ಆದರಿಂದಲ್ಲವೇ ನಾನು ಇಷ್ಟನ್ನೂ ಅನುಭವಿಸಬೇಕಾಯಿತು. ಎಲೈ ಮಕ್ಕಳಿರಾ, ನೀವೆಲ್ಲರೂ ಸಜ್ಜನರು. ಎಷ್ಟೋ ಪ್ರಯಾಸದಿಂದ ನಿಮ್ಮನ್ನು ಪಡೆದೆನು. ನಿಮ್ಮನ್ನು ಬಿಟ್ಟಿರಲಾರೆನು. ನಾನೂ

ನಿಮ್ಮೊಡನೆಯೇ ಬರುವೆನು. ಅಯ್ಯೋ! ಕೃಷ್ಣಾ, ನನ್ನನ್ನು ಯಾತಕ್ಕೆ ಹೀಗೆ ತೊರೆದೆ? ಜೀವಿಗಳಿಗೆಲ್ಲಾ ಮರಣವು ಸಿದ್ಧವಾಗಿರುವದು. ಮೃತ್ಯುವೇ ನನ್ನ ಮರಣವನ್ನು ಮರೆತುಬಿಟ್ಟಿತೋ, ಏನೋ? ಹಾಗಿಲ್ಲದಿದ್ದರೆ ನನಗೆ ಮರಣವು ಯಾತಕ್ಕೆ ಬರುವದಿಲ್ಲ. ಕೃಷ್ಣಾ, ದ್ವಾರಕಾವಾಸೀ ಸಂಕರ್ಷಣಾನುಜಾ, ನೀನು ಎಲ್ಲಿರುವೆ? ನೀನು ನಮ್ಮನ್ನು ಯಾಕೆ ಬಿಡಿಸಲೊಲ್ಲೆ? ನಿನ್ನ ಭಕ್ತರನ್ನು ನೀನು ಕಾಪಾಡುವವನಲ್ಲವೇ? ನನ್ನ ಮಕ್ಕಳೆಲ್ಲಾ ನಿನ್ನ ಭಕ್ತರಲ್ಲವೇ? ನೀನು ಭಕ್ತಕುಟುಂಬಿಯಲ್ಲವೆ? ಇವರಿಗೆ ಈ ದುಃಖವು ಪ್ರಾಪ್ತಿಸಬಹುದೇ! ಇವರಲ್ಲಿ ನಿನ್ನ ಕಾರುಣ್ಯವನ್ನು ತೋರಿಸು. ಅಯ್ಯೋ! ಭೀಷ್ಮದ್ರೋಣಕೃಪಾದಿಗಳ ಕಣ್ಣಿದಿರಿಗೆ ಹೀಗಾಗಬಹುದೇ! ಪಾಂಡುಮಹಾರಾಜನೇ, ನೀನೆಲ್ಲಿರುವೆ, ನೀನು ಯಾತಕ್ಕೆ ಸುಮ್ಮನಿರುವೆ, ನಿನ್ನ ಮಕ್ಕಳ ಅರಣ್ಯವಾಸವು ನಿನಗೆ ಸಮ್ಮತವೆ? ಸಹದೇವ, ನಿಲ್ಲು ನಿಲ್ಲು. ನೀನು ಹೋಗಬೇಡ. ನಾನು ನಿನ್ನನ್ನು ಬಿಟ್ಟಿರಲಾರೆನು. ನೀನು ನನ್ನ ಸಮೀಪದಲ್ಲಿರು. ನನ್ನನ್ನು ತೊರೆದುಬಿಡಬೇಡ. ನನ್ನಲ್ಲಿ ಕರುಣವುಳ್ಳವನಾಗು. ಸತ್ಯಕ್ಕೋಸ್ಕರ ಹೋಗಬೇಕಾದರೆ, ನಿನ್ನ ಅಣ್ಣಂದಿರು ಹೋಗಲಿ. ಮಾತೃಶುಶ್ರೂಷೆಯ ಪುಣ್ಯವು ನಿನಗೆ ಬರಲಿ." ಎಂದು ಗೋಳಾಡುತ್ತಿದ್ದಳು.

ತಮ್ಮ ತಾಯಿಯನ್ನು ಸಮಾಧಾನಗೊಳಿಸಿ, ಪಾಂಡವರು ಅರಣ್ಯಕ್ಕೆ ಹೊರಟುಹೋದರು. ವಿದುರನು ಪೃಥಾದೇವಿಗೆ ಸಮಾಧಾನವನ್ನು ಹೇಳಿ, ಮೆಲ್ಲಗೆ ತನ್ನ ಅರಮನೆಗೆ ಕರೆದುಕೊಂಡು ಹೋದನು. ಅಂತಃಪುರದವರೆಲ್ಲಾ ಈ ಸಮಾಚಾರಗಳನ್ನೆಲ್ಲಾ ಕೇಳಿ, ಕಣ್ಣೀರಾಗಿ ಕರಗಿ ಹೋದರು.

ಪಾಂಡವರ ವಿರೋಧದಿಂದ ತನ್ನ ಮಕ್ಕಳಿಗೆ ಉಂಟಾಗುವ ವಿಪತ್ಪರಂಪರೆಗಳನ್ನೆಲ್ಲಾ ಯೋಚಿಸಿ, ಕಳವಳಗೊಂಡು ಧೃತರಾಷ್ಟ್ರನು ವಿದುರನನ್ನು ತನ್ನ ಬಳಿಗೆ ಬರಮಾಡಿಕೊಂಡು "ಪಾಂಡವರು ಹಸ್ತಿನಾಪುರವನ್ನು ಬಿಟ್ಟು ಹೋದದ್ದು ಹ್ಯಾಗೆ? ಅದನ್ನು ವಿಸ್ತಾರವಾಗಿ ನನಗೆ ತಿಳುಹಬೇಕು." ಎಂದು ಕೇಳಿದನು.

"ಎಲೈ ರಾಜನೇ, ಯುಧಿಷ್ಠಿರನು ತಲೆಗೆ ಮುಸುಕುಹಾಕಿಕೊಂಡು ಹೋದನು. ಭೀಮನು ತನ್ನ ಬಾಹುದಂಡಗಳನ್ನು ನೋಡುತ್ತಾ ಹೋದನು. ಅರ್ಜುನನು

ಮರಳನ್ನು ಸುತ್ತಲೂ ಎರಚುತ್ತಾ ದೊರೆಯ ಹಿಂದೆ ಹೋದನು. ನಕುಲಸಹದೇವರು ದೂಳಿಯಿಂದ ಮಲಿನಶರೀರರಾಗಿ ಹೋದರು. ದ್ರೌಪದೀದೇವಿಯು ತಲೆಯನ್ನು ಕೆದರಿಕೊಂಡು ಅಳುತ್ತಾ ಹೋದಳು. ಧೌಮ್ಯರು ದರ್ಭೆಯನ್ನು ಕೈಯಲ್ಲಿ ಹಿಡಿದುಕೊಂಡು ಸಾಮವೇದವನ್ನು ಪಠಿಸುತ್ತಾಹೋದರು." ಎಂದನು.

ಅದಕ್ಕೆ ಧೃತರಾಷ್ಟ್ರನು "ಪಾಂಡವರು ಹೀಗೆ ಭಿನ್ನಭಿನ್ನವಾದ ವೇಷಗಳಿಂದ ಯಾತಕ್ಕೆ ಹೋದರು?" ಎಂದು ಕೇಳಲು ;

"ನಿನ್ನ ಮಕ್ಕಳು ಯುಧಿಷ್ಠಿರನ ಸರ್ವಸ್ವವನ್ನೂ ಮೋಸದಿಂದ ಅಪಹರಿಸಿದರೂ ಅವರು ನ್ಯಾಯವನ್ನು ಮೀರುವವರಲ್ಲ. ತನ್ನ ಕೆಂಪೇರಿದ ಕಣ್ಣುಗಳಿಂದ ಜನರನ್ನು ಉರಿಸಬಾರದೆಂದು ಯುಧಿಷ್ಠಿರನು ಮುಸುಕುಹಾಕಿಕೊಂಡು ಹೋದನು. ಬಾಹುಬಲದಲ್ಲಿ ತನಗೆ ಸಮಾನರು ಯಾರೆಂದು ಯೋಚಿಸುತ್ತಾ ಭೀಮನು ತನ್ನ ತೋಳುಗಳನ್ನು ನೋಡಿಕೊಂಡುಹೋದನು. ಅರ್ಜುನನು, ಈಗ ನಾನು ಮರಳನ್ನು ಕೆದರುವಂತೆ ಮುಂದೆ ಯುದ್ಧದಲ್ಲಿ ಬಾಣವರ್ಷವನ್ನು ಕರೆಯುವೆನೆಂದು ಸೂಚಿಸುತ್ತಾ ಹೋದನು. ಈ ವಿಪತ್ಕಾಲದಲ್ಲಿ ತನ್ನನ್ನು ಯಾರೂ ನೋಡಕೂಡದೆಂದು ಸಹದೇವನೂ, ತನ್ನ ರೂಪಿಗೆ ಯಾರಾದರೂ ಸ್ತ್ರೀಯರು ಸೋಲುವರೆಂದು ನಕುಲನೂ ಮಲಿನಾಂಗರಾಗಿ ಇದ್ದರು. ಯಾರಿಂದ ತನಗೆ ಮಾನಭಂಗವುಂಟಾಯಿತೋ ಅವರ ಪತ್ನಿಯರು ಹದಿನಾಲ್ಕು ವರ್ಷಗಳಾದ ಬಳಿಕ ತಮ್ಮ ಪತಿಗಳನ್ನೂ, ಪುತ್ರರನ್ನೂ, ಬಂಧುಗಳನ್ನೂ, ಇಷ್ಟರನ್ನೂ ನೀಗಿ ಅವರಿಗೆಲ್ಲಾ ತಿಲೋದಕವನ್ನು ಕೊಟ್ಟು ತನ್ನಂತೆ ತಲೆಯನ್ನು ಕೆದರಿಕೊಂಡು ಹಸ್ತಿನಾಪುರಿಗೆ ಪ್ರವೇಶಿಸುವದನ್ನು ಸೂಚಿಸುವಂತೆ ದ್ರೌಪದಿಯು ತಲೆಯನ್ನು ಕೆದರಿಕೊಂಡು ಅಳುತ್ತಾ ಹೋದಳು. ಧೌಮ್ಯನು ದರ್ಭೆಯನ್ನು ದಕ್ಷಿಣಾಗ್ರವಾಗಿ ಹಿಡಿದುಕೊಂಡು ಸಾಮವೇದವನ್ನು ಪಠಿಸುತ್ತಾ, ಮುಂದೆ ಕುರುಗಳು ಹತರಾದಾಗ ಈ ರೀತಿಯಲ್ಲಿಯೇ ಪುರೋಹಿತರು ಸಾಮಗಾನವನ್ನು ಮಾಡುವರೆಂದು ಸೂಚಿಸುತ್ತಾ ಹೋದನು.

"ಇದನ್ನು ನೋಡಿ ಪ್ರಜೆಗಳೆಲ್ಲರೂ ಕೌರವರನ್ನೂ ಕುರುವೃದ್ಧರನ್ನೂ ನಿಂದಿಸುತ್ತಿದ್ದರು. ಪಾಂಡವರು ಹೊರಟುಹೋದ ಕೂಡಲೆ ಮೋಡವಿಲ್ಲದೆ ಮಿಂಚು

ಮಿಂಚಿತು; ಭೂಮಿಯು ಕಂಪಿಸಿತು. ಉತ್ತರದಲ್ಲಿ ಉಲ್ಕಾಪಾತವಾಯಿತು. ಗೋಪುರಗಳ ಮೇಲೂ ಅಶ್ವತ್ಥಗಳ ಮೇಲೂ ಹದ್ದುಗಳೂ ಗೂಗೆಗಳೂ ಕೂಗಿದವು. ಈ ದುಶ್ಶಕುನಗಳೆಲ್ಲವೂ ಸುಮ್ಮನೆ ಹೋಗಲಾರವು." ಎಂಬದಾಗಿ ವಿದುರನು ಧೃತರಾಷ್ಟ್ರನಿಗೆ ಹೇಳುತ್ತಿರುವಲ್ಲಿ ಅನೇಕಋುಷಿಗಳಿಂದ ಪರಿವೃತನಾಗಿ ನಾರದನು ಅಲ್ಲಿಗೆ ಬಂದು "ಈ ದಿನ ಮೊದಲು ಹದಿನಾಲ್ಕು ವರ್ಷಗಳು ಆದ ಮೇಲೆ ಭೀಮಾರ್ಜುನರಿಂದ ಕೌರವರು ನಿಶ್ಶೇಷವಾಗಿ ಹತರಾಗುವರು." ಎಂದು ಹೇಳಿ ಅದೃಶ್ಯನಾದನು.

ಆ ಬಳಿಕ ಈ ಕಾಲದಲ್ಲಿ ದ್ರೋಣನಲ್ಲದೆ ರಕ್ಷಕರು ಮತ್ತೆ ಯಾರೂ ಇಲ್ಲವೆಂದು ತಿಳಿದು, ದುರ್ಯೋಧನಕರ್ಣಾದಿಗಳು ದ್ರೋಣಾಚಾರ್ಯನಿಗೆ ರಾಜ್ಯರಕ್ಷಣೆಯನ್ನು ವಹಿಸಿದರು. ದ್ರೋಣನು "ಪಾಂಡವರು ದೇವಾಂಶದವರು, ಅಜೇಯರು; ಧೃತರಾಷ್ಟ್ರಪುತ್ರರೂ ಇತರರಾಜರೂ ನನ್ನನ್ನು ಮರೆಹೊಕ್ಕರು. ನನಗೆ ಸಾಧ್ಯವಾದವರೆಗೂ ಅವರನ್ನು ಕಾಪಾಡುವೆನು. ಮುಖ್ಯವಾಗಿ ವಿಧಿಯ ಆಜ್ಞೆಯು ಅನುಲ್ಲಂಘ್ಯವಾದದ್ದು. ಪಾಂಡವರು ತಮ್ಮ ಮಾತಿನಂತೆ ಕಾಡಿಗೆ ಹೊರಟುಹೋದರು; ಅಲ್ಲಿ ಹನ್ನೆರಡು ವರ್ಷಗಳ ವರೆಗೂ ಬ್ರಹ್ಮಚರ್ಯವ್ರತದಲ್ಲಿದ್ದು ಮರಳಿ ಬರುವರು; ಆಗ ತಮ್ಮ ಹಗೆಯನ್ನು ತೀರಿಸಿಕೊಳ್ಳುವರು. ಹಿಂದೆ ನಾನು ದ್ರುಪದನನ್ನು ಮಾನಭಂಗಪಡಿಸಿದ್ದಕ್ಕಾಗಿ ನನ್ನನ್ನು ಕೊಲ್ಲುವದಕ್ಕೋಸ್ಕರಲೇ ಯಾಜೋಪಯಾಜರ ಸಹಾಯದಿಂದ ದ್ರುಪದನು ಧೃಷ್ಟದ್ಯುಮ್ನನನ್ನು ಯಜ್ಞದಲ್ಲಿ ಪಡೆದನು. ಅವನು ಪಾಂಡವರ ಪಕ್ಷದಲ್ಲಿರುವದು ಸ್ವಭಾವವಾಗಿಯೇ ಇದೆ. ಧೃಷ್ಟದ್ಯುಮ್ನನು ದ್ರೋಣನಿಗೆ ಮೃತ್ಯುವೆಂದು ಎಲ್ಲರೂ ಹೇಳಿಕೊಳ್ಳುವರು. ನಾನೂ ಇದನ್ನು ಕೇಳಿದ್ದೇನೆ. ದುರ್ಯೋಧನಾ, ನಿನ್ನಿಂದ ಇಷ್ಟು ಒದಗಿತು. ನಿನಗೆ ಮುಂದಕ್ಕೆ ಯಾವದು ಹಿತವೋ, ಅದನ್ನು ಮಾಡು. ಪಾಂಡವರನ್ನು ಕಾಡಿಗೆ ಅಟ್ಟಿದಮಾತ್ರದಿಂದಲೇ ಎಲ್ಲವೂ ಆಯಿತೆಂದು ತಿಳಿಯಬೇಡ. ನಿನ್ನ ಸುಖವು ಕ್ಷಣಿಕವಾದದ್ದು. ಯಜ್ಞಗಳನ್ನು ಮಾಡಿ ಬೇಕಾದಹಾಗೆ ಕೊಟ್ಟು ಸುಖಪಡು. ಹದಿನಾಲ್ಕು ವರ್ಷಗಳಾದನಂತರ ನೀನು ಯಾರೋ, ರಾಜ್ಯ ಯಾವದೋ?" ಎಂದನು.

ಇದನ್ನು ಕೇಳಿ ಧೃತರಾಷ್ಟ್ರನು “ದ್ರೋಣನ ಮಾತು ಯಥಾರ್ಥ. ಎಲೈ ಕ್ಷತ್ತಾ, ಪಾಂಡವರನ್ನು ಕರೆದುಕೊಂಡು ಬಾ. ಬರದಿದ್ದರೆ ಅವರು ಅವರ ರಥದೊಡನೆಯೂ, ಸೇನೆಯೊಡನೆಯೂ, ಪರಿಜನದೊಡನೆಯೂ ಹೋಗಲಿ!” ಎಂದು ಹೇಳಿದನು.

ಪಾಂಡವರು ದ್ಯೂತದಲ್ಲಿ ಸೋತು ಕಾಡಿಗೆ ಹೋದರೂ, ಧೃತರಾಷ್ಟ್ರನು ಮನಸ್ಸಿನಲ್ಲಿ ನೆಮ್ಮದಿಯಿಲ್ಲದೆ ಕಳವಳಿಸುತ್ತಿದ್ದದನ್ನು ತಿಳಿದು, ಸಂಜಯನು ಹೋಗಿ, “ಎಲೈ ಪ್ರಭೂ, ರಾಜ್ಯವೆಲ್ಲಾ ನಿನ್ನ ಕೈಸೇರಿತು; ಪಾಂಡವರೂ ಕಾಡಿಗೆ ಹೋದರು. ಇನ್ನೂ ಯಾತಕ್ಕೆ ಗೋಳಾಡುತ್ತೀಯೆ?” ಎಂದು ಕೇಳಿದನು.

“ನಮಗೆ ಗೋಳಾಟವಲ್ಲದೆ ಇನ್ನೇನು? ನಾಳೆತಾನೆ ಪಾಂಡವರೆಲ್ಲರೂ ತಮ್ಮವರನ್ನು ಕೂಡಿಕೊಂಡು ಬಂದು, ನನ್ನ ಮಕ್ಕಳನ್ನೆಲ್ಲಾ ಕೊಂದುಬಿಡುವರು.” ಎನ್ನಲು;

“ಇದಿಷ್ಟೂ ನಿನ್ನ ಪ್ರಸಾದವೇ. ನಿನ್ನಿಂದ ಕೌರವವಂಶಮಾತ್ರವೇ ನಷ್ಟವಾಗಲಿಲ್ಲ; ಕ್ಷತ್ರಿಯವಂಶವೇ ನಷ್ಟವಾಯಿತು. ಭೀಷ್ಮದ್ರೋಣಾದಿಗಳು ಬೇಡ ಬೇಡವೆಂದು ಎಷ್ಟುಬಗೆಯಿಂದ ಹೇಳಿದರೂ ಕೇಳದೆ ದುರ್ಯೋಧನನೀಚನು ದ್ರೌಪದಿಯನ್ನು ಎಳೆತರಿಸಿದನು. ವಿನಾಶಕಾಲಕ್ಕೆ ವಿಪರೀತಬುದ್ಧಿಯುಂಟಾಗುವದು ನಿಶ್ಚಯ. ಕೇಡುಗಾಲಕ್ಕೆ ಒಳ್ಳೆಯದು ಕೆಟ್ಟದ್ದಾಗಿಯೂ, ಕೆಟ್ಟದ್ದು ಒಳ್ಳೆಯದಾಗಿಯೂ ತೋರುವದು. ವಿಧಿಯೆಂಬುವದು ಒನಕೆಯನ್ನು ತೆಗೆದುಕೊಂಡು ಬಂದು ಒಬ್ಬನ ತಲೆಯನ್ನು ಹೊಡೆಯುವದಿಲ್ಲ; ಅವನ ವಿವೇಕವನ್ನು ಹಾಳುಮಾಡುವದು. ಪಾಂಚಾಲಿಯನ್ನು ಎಳೆದದ್ದು ನಿಮ್ಮ ಕತ್ತಿನ ನೇಣನ್ನು ನೀವೇ ಬಿಗಿಕೊಂಡಹಾಗಾಯಿತು. ಜೂದಾಳಿಯಾದ ದುರ್ಯೋಧನನಲ್ಲದೆ ಇನ್ನು ಯಾರುತಾನೆ ಆ ಕೆಲಸವನ್ನು ಮಾಡುತ್ತಿದ್ದರು. ಹಾಗೆ ಎಳೆದುಕೊಂಡುಬಂದು ತಾವು ಮನಸ್ಸಿಗೆ ಬಂದಂತೆ ಅವಳನ್ನು ಯಾತಕ್ಕೆ ಆಡಬೇಕಾಗಿತ್ತು? ಇವೆಲ್ಲಾ ಸುಮ್ಮಗೆ ಹೋಗುವವೆಂದು ತಿಳಿಯಬೇಡ.” ಎಂದು ಸಂಜಯನು ಹೇಳಿದನು.

ಧೃತರಾಷ್ಟ್ರನು “ ಓ ಸಂಜಯಾ, ದುಃಖಿತಳಾದ ದ್ರೌಪದಿಯ ಸೋಟವು ಜಗತ್ತನ್ನೇ ಸುಟ್ಟುಬಿಡತಕ್ಕದ್ದು. ನನ್ನ ಮಕ್ಕಳಲ್ಲಿ ಒಬ್ಬರಾದರೂ ಬದುಕುತ್ತಾರೆಯೋ ಇಲ್ಲವೋ ಹೇಳಪ್ಪಾ! ಪಾಂಚಾಲಿಗಾದ ಅವಮಾನಕ್ಕೆ ರಾಜ್ಯವೇ ಅಳುವದಂತೆ. ಗಾಂಧಾರಿಯೇ ಮೊದಲಾದ ಅಂತಃಪುರಸ್ತ್ರೀಯರು ನಿತ್ಯವೂ ಗೋಳಾಡುತ್ತಿರುವರು. ಆ ದಿನ ಬ್ರಾಹ್ಮಣರೆಲ್ಲರೂ ಅಗ್ನಿಹೋತ್ರವನ್ನೇ ಬಿಟ್ಟುಬಿಟ್ಟರಂತೆ. ಸುಟ್ಟುರೆಗಾಳಿ ಬೀಸಿತಂತೆ. ನಕ್ಷತ್ರಪತನವುಂಟಾಯಿತಂತೆ. ಅಕಾಲದಲ್ಲಿ ಸೂರ್ಯಗ್ರಹಣವುಂಟಾಯಿತಂತೆ. ರಥಗಳೆಲ್ಲಾ ಇದ್ದಕ್ಕಿದ್ದಹಾಗೆ ಹತ್ತಿಕೊಂಡವಂತೆ. ಧ್ವಜಗಳು ಮುರಿದು ಬಿದ್ದವಂತೆ. ಯಜ್ಞಶಾಲೆಯಲ್ಲಿ ನರಿಗಳು ಕೂಗಿಕೊಂಡವಂತೆ. ಕತ್ತೆಗಳು ಪ್ರತಿಧ್ವನಿಯನ್ನು ಕೊಟ್ಟವಂತೆ. ಮತ್ತು ಭೀಷ್ಮದ್ರೋಣಾದಿಗಳು ಸಭೆಯನ್ನು ಬಿಟ್ಟು ಹೊರಟುಹೋದ ಮೇಲೆ, ವಿದುರನ ಮಾತಿನ ಮೇಲೆ ದ್ರೌಪದಿಗೆ ನಾನು ಮೂರು ವರಗಳನ್ನು ಕೊಟ್ಟೆನು. ಆ ಕಾಲದಲ್ಲಿ ವಿದುರನು ‘ ಹೀಗೆ ದ್ರೌಪದಿಗೆ ಅಪಮಾನಮಾಡಿದ್ದು ಕ್ಷತ್ರಿಯ ಕುಲಕ್ಕೆ ಕೊಡಲಿಯನ್ನು ಮಸೆದಂತಾಯಿತು. ದ್ರೌಪದಿಯು ಸಾಕ್ಷಾಲ್ಲಕ್ಷ್ಮಿಯು; ಅವಳ ಮಾನಭಂಗವನ್ನು ಪಾಂಡವರು ಎಂದಿಗೂ ಸಹಿಸುವದಿಲ್ಲ. ವೃಷ್ಣಿಗಳೂ ಪಾಂಚಾಲರೂ ಸುಮ್ಮಗಿರುವರೆಂದು ನೆನೆಯಬೇಡ. ವಾಸುದೇವನ ಸಹಾಯದಿಂದ ಅರ್ಜುನನು ಪಾಂಚಾಲರೊಡನೆ ಹಿಂದಿರುಗಿ ಬರುವನು. ಭೀಮನು ಗದಾದಂಡವನ್ನು ತಿರುಗಿಸುತ್ತಾ ಯಮನಂತೆ ಬರುವನು. ನಿನ್ನವರೆಲ್ಲಾ ಭೀಮನ ಗದೆಗೆ ಇದಿರೇ? ಆದ್ದರಿಂದಲೇ ಪಾಂಡವರಲ್ಲಿ ಮೈತ್ರಿಯಲ್ಲದೆ ವೈರವು ನಡೆಯುವದಿಲ್ಲ. ಅವರು ಯಾವಾಗಲೂ ಕೌರವರಿಗಿಂತಲೂ ಬಲಾಢ್ಯರು. ಭೀಮನು ಜರಾಸಂಧನನ್ನು ಕೊಂದದ್ದನ್ನು ನೀನೇ ಬಲ್ಲೆ. ಆದಕಾರಣ ಅವರೊಡನೆ ಮೈತ್ರಿಮಾಡಿಕೊಳ್ಳುವದೇ ಉತ್ತಮ. ನೀನು ಹಿಂದೆಗೆಯದೆ ಇಬ್ಬರಿಗೂ ಸ್ನೇಹವನ್ನು ಉಂಟುಮಾಡು. ಹೀಗೆ ಮಾಡಿದರೆ ನಿನಗೆ ನಿಜವಾಗಿಯೂ ಕ್ಷೇಮವುಂಟಾಗುವದು. ’ ಎಂದು ಹೇಳಿದನು. ಈ ಹಿತೋಕ್ತಿಯನ್ನೂ ಕೇಳದೆ ನಾನು ಮರುಳಾದ್ದರಿಂದಲ್ಲವೇ ಇಷ್ಟು ಉಂಟಾಯಿತು!” ಎಂದು ದುಃಖಸಾಗರದಲ್ಲಿ ಮುಳುಗಿಹೋದನು.

ಇತ್ತ ಪಾಂಡವರು ಕಾಮ್ಯಕವನವನ್ನು ಸೇರಿ, ಶ್ರೀಕೃಷ್ಣಧ್ಯಾನೈಕಪರರಾಗಿರುತ್ತಿದ್ದರು.

ಕಂ॥ ಎರಡನೆಯ ಪರ್ವಮಿದರೊಳ್ ।
ದೊರೆಕೊಳ್ವುದು ಮೊದಲಪರ್ವದಿಂದೆಯುಮಿನಿದಾ ॥
ಗಿರೆ ರಸಮಿಾಭಾರತದೊಳ್ ।
ಪರಿವರ್ಧಿಪುದಲ್ತೆ ಪರ್ವಪರ್ವದೊಳಮೃತಂ ॥

ಮಹಾಭಾರತ ಕಥಾಪ್ರಸಂಗದಲ್ಲಿ

ಸಭಾಪರ್ವಂ ಸಂಪೂರ್ಣಂ.

